ಶ್ರೀ

ಜಯಗುರು ಶಂಕರ ಭಗವನ್

ಶ್ರೀ ಮತ್ಪೂಜ್ಯ ಶಂಕರ ಭಗವತ್ಪಾದಾಚಾರ್ಯ
ವಿರಚಿತ

ಪ್ರಸ್ಥಾನತ್ರಯ ಭಾಷ್ಯಾನುಸಾರವಾದ

# ಅದ್ವೈತ ಸಿದ್ಧಿ

ಬರೆದವರು :
ವೇ|| ಬ್ರ|| ಶ್ರೀ|| ವೇದಾಂತ ಸುಬ್ಬಯ್ಯಶಾಸ್ತ್ರಿ

ಶ್ರೀ ಶಂಕರಾಶ್ರಮ
ನಂ. 62, ರತ್ನವಿಲಾಸ ಬೀದಿ, ಬಸವನಗುಡಿ, ಬೆಂಗಳೂರು–4.
1979



|| ಶ್ರೀಮತ್ಪೂಜ್ಯ ಶಂಕರ ಭಗವತ್ಪಾದಾಚಾರ್ಯಃ ||

ಶ್ರೀ

ಜಯಗುರು ಶಂಕರ ಭಗವಣ್

ಶ್ರೀ ಮತ್ಪೂಜ್ಯ ಶಂಕರ ಭಗವತ್ಪಾದಾಚಾರ್ಯರ
ವಿರಚಿತ

ಪ್ರಸ್ಥಾನತ್ರಯ ಭಾಷ್ಯಾನುಸಾರವಾದ

# ಅದ್ವೈತ ಸಿದ್ಧಿ

ಬರೆದವರು :
ವೇ|| ಬ್ರ|| ಶ್ರೀ|| ವೇದಾಂತ ಸುಬ್ಬಯ್ಯಶಾಸ್ತ್ರಿ

ಶ್ರೀ ಶಂಕರಾಶ್ರಮ
ನಂ. 62, ರತ್ನವಿಲಾಸ ಬೀದಿ, ಬಸವನಗುಡಿ, ಬೆಂಗಳೂರು–4.
1979

# ವಿಷಯ ಸೂಚಿಕೆ

# ತಿದ್ದುಪಡಿ

| ಪೀಠಿಕೆ ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| iii | 6 | ಮಿತ್ರ | ಮಿಶ್ರ |
| iii | 15 | ಗದ್ದ | ಗೆದ್ದ |
| 1 | 1 | — | ಭಾಷ್ಯರೀತ್ಯಾ |
| 21 | 9 | ಕಾರಣ | ಕಾರ್ಯ |
| 26 | 18 | ನಿವೃ | ನಿವೃತ್ತಿ |
| 41 | 9 | ವಿಚಿ | ವಿಚಿತ್ರ |
| 61 | 22 | ರವ | ರೂಪಾ |
| 61 | 23 | ಭವ | ಭೂತಾ |
| 69 | 2 | ಮೃತ್ರ್ಯಃ | ಮೃತ್ಯುಃ |
| 70 | 13 | ಯೋವನಿ | ಯೋವೇದ |
| 73 | 7 | ಅವಜ್ಞಾನ | ಅವಾಙ್ಮಾನ |
| | | ಸಗೋಚರನಾ | ಬಿಡಬೇಕು |
| 79 | 1 | ಣ | ಕಾರಣ |

ಈ ಗ್ರಂಥ ವಿಷಯವು ಭಾಷ್ಯ ವಿರುದ್ಧವೆಂಬ ಅಭಿಪ್ರಾಯದಿಂ ಖಂಡಿಸಲಿಚ್ಛೆಯುಳ್ಳ ಪಂಡಿತರು ಅಗತ್ಯವಾಗಿ ಕೇವಲ ಭಾಷ್ಯಾ ಧಾರಾದಿಂ ಖಂಡಿಸಬಹುದು. ಯಾವ ಬೇರೆ ವ್ಯಾಖ್ಯಾನವು ಪ್ರಮಾಣವೆಂದು ಸ್ವೀಕರಿ ವದಿಲ್ಲವೆಂಬುದು ಗಮನಾರ್ಹ.

ಗ್ರಂಥಕರ್ತ

# ಪೀಠಿಕೆ

ಶ್ರೀಮಚ್ಛಂಕರ ಭಗವತ್ಪಾದಾಚಾರ್ಯಕೃತ ಪ್ರಸ್ಥಾನತ್ರಯ ಭಾಷ್ಯವು ಜಗತ್ತಿನಲ್ಲಿ ಸುಪ್ರಸಿದ್ಧವು. ಇವುಗಳಲ್ಲಿ ಬ್ರಹ್ಮಸೂತ್ರ ಭಾಷ್ಯವು ಬಹು ಪ್ರಾಧಾನ್ಯಸ್ಥಾನವನ್ನು ಹೊಂದಿದೆ. ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ತತ್ತ್ವವನ್ನೆಲ್ಲ ಸೂತ್ರಗಳ ರೂಪವಾಗಿಟ್ಟು ರಚಿಸಲ್ಪಟ್ಟಿರುವುದರಿಂದ ಇದು ವೇದಾಂತಸೂತ್ರಗಳೆಂಬ ಹೆಸರನ್ನು ಪಡೆದಿದೆ ಹಾಗೆಯೇ ಉಪನಿಷತ್ಪ್ರತಿಪಾದಿತ ವಾದ ಬ್ರಹ್ಮಸ್ವರೂಪವನ್ನು ನಿರ್ಣಯಿಸಿ ಬೋಧಿಸುತ್ತಿರುವದರಿಂದ ಇದು ಬ್ರಹ್ಮ ಸೂತ್ರಗಳೆಂಬ ಹೆಸರನ್ನೂ ಪಡೆದಿದೆ. ಇದಕ್ಕೆ 'ಶಾರೀರಕ ಮೀಮಾಂಸಾ' ಎಂಬ ಮತ್ತೊಂದು ಹೆಸರೂ ಉಂಟು. ಏಕೆಂದರೆ ಈ ಶರೀರದೊಳಗಿರುವ ಚೈತನ್ಯಾ ತ್ಮನೇ ಶಾರೀರಕನೆಂದೂ ವಿಜ್ಞಾನಾತ್ಮನೆಂದೂ ಹೇಳಲ್ಪಡುತ್ತಿದ್ದರೂ, ಅವನೇ ತತ್ತ್ವವನ್ನರಿತರೆ ತನಗೆ ಉಪಾಧಿಯಾದ ಅವಿದ್ಯೆಯನ್ನು ಕಳೆದು ತಾನಾ ಪರಮಾತ್ಮನೇ ಎಂದು ಉಪನಿಷತ್ತುಗಳು ಬೋಧಿಸುತ್ತಿರುವದರಿಂದ ಇದನ್ನು 'ಶಾರೀರಕ ಮೀಮಾಂಸಾ'ಎಂದೂ ಕರೆಯುತ್ತಾರೆ. ಈ ವಿಧ ತತ್ತ್ವ ಜ್ಞಾನವನ್ನು ದರ್ಶನವೆಂದೂ ಕರೆಯುವದುಂಟು. ಸಾಂಖ್ಯ, ವೈಶೇಷಿಕ, ಯೋಗ, ನ್ಯಾಯ, ಪೂರ್ವ ಮೀಮಾಂಸಾ ಉತ್ತರ ಮೀಮಾಂಸಾ ಎಂಬೀ ಆರು ಷಡ್ದರ್ಶನಗಳೆನಿ ಸುವುವು. ಕರ್ಮತತ್ತ್ವವನ್ನು ಪೂರ್ವ ಮೀಮಾಂಸಾ ಎಂದೂ, ವೇದಾಂತ ತತ್ತ್ವವನ್ನು ಉತ್ತರ ಮೀಮಾಂಸಾ ಎಂದೂ ಹೇಳುತ್ತಾರೆ. ಮುಮುಕ್ಷುಗಳಿಗೆ ಪ್ರಸ್ಥಾನತ್ರಯ—ಎಂದರೆ ದಶೋಪನಿಷತ್ತುಗಳೂ, ಬ್ರಹ್ಮ ಸೂತ್ರಗಳೂ, ಭಗವದ್ಗೀತೆ—ಮತ್ತು ಇವುಗಳ ಭಾಷ್ಯವೇ ಪ್ರಮಾಣವು. ದೇಶದಲ್ಲೆಲ್ಲಾ ಪಂಡಿತರಿಗೆ ಈ ವಿಷಯದಲ್ಲಿ ಸರ್ವ ಸಮ್ಮತಾಭಿಪ್ರಾಯವಿದೆ. ಶ್ರುತ್ಯಾಧಾರ ದಿಂದಲೆ ಭಾಷ್ಯಕಾರರು ತತ್ತ್ವವನ್ನು ನಿರ್ಣಯಿಸಿ ಭಾಷ್ಯವನ್ನು ರಚಿಸಿ ಭಕ್ತರಿಗೆ ಅನುಗ್ರಹಿಸಿರುವರು. ತದ್ಭಿನ್ನವಾದ ಯಾವ ವ್ಯಾಖ್ಯಾನವೂ ಪ್ರಮಾಣವೆನಿಸ ಲಾರದು.

ಆದರೆ ಸ್ವಾಮಿ ಶಂಕರ ಗುರುನಾಥನ ಅನಂತರ ಸುಮಾರು 1000 (ಒಂದು ಸಾವಿರ) ವರ್ಷಗಳು ಕಳೆದ ಮೇಲೆ ಮಹಾ ಪಂಡಿತರಾದ ವ್ಯಾಖ್ಯಾನ

ಕಾರರನೇಕರು ಬ್ರಹ್ಮಸೂತ್ರ ಭಾಷ್ಯವು ಪರಮ ಗಂಭೀರವಾಗಿ ದುರವಗಾಹ ವಾಗಿದೆ ಎಂದೂ ಮುಮುಕ್ಷು ಜನ ಹಿತಾರ್ಥವಾಗಿ ಸುಲಭ ಗ್ರಾಹ್ಯವಾಗಿರುವಂತೆ ತಮ್ಮ ತಮ್ಮ ವ್ಯಾಖ್ಯಾನಗಳನ್ನು ಬರೆದು ಅದೇ ಶ್ರೀ ಶಂಕರಗುರು ಭಾಷ್ಯ ಸಿದ್ಧಾಂತವೆಂದು ಪ್ರಕಟಿಸಿರುವರು. ಇದೇ ಈಗ ರೂಢಿಯಲ್ಲಿರುವುದು

ದೇಶದಾದ್ಯಂತವು ಅಲ್ಲಿಂದೀಚೆಗೆ ಸುಮಾರು 1000 ವರ್ಷಗಳಿಂದ ಶಂಕರಭಾಷ್ಯ ಸಿದ್ಧಾಂತವೆಂದು ಪಂಡಿತರೂ, ಗುರು ಸ್ವಾಮಿಗಳವರೂ, ಪಾಠಶಾಲೆಗಳಲ್ಲಿಯು, ವಿಶ್ವ ವಿದ್ಯಾನಿಲಯಗಳಲ್ಲಿಯು ಅಧ್ಯಾಪಕರೂ ಪ್ರಾಧ್ಯಾ ಪಕರೂ ಎಲ್ಲರೂ ಈ ವ್ಯಾಖ್ಯಾನಗಳನ್ನೇ ಅನುಸರಿಸುತ್ತಾ ಗುರು ಭಾಷ್ಯವನ್ನು ಉಪೇಕ್ಷಿಸಿರುವರು

ಅವುಗಳಲ್ಲಿ ಪಂಚಪಾದಿಕೆ ಮತ್ತು ಭಾಮತಿ ಎಂಬೀ ಎರಡು ವ್ಯಾಖ್ಯಾನ ಗಳು ಈಗಲೂ ರೂಢಿಯಲ್ಲಿವೆ ಪಂಚಪಾದಿಕೆಯನ್ನು ಬರೆದವರು ಶಂಕರ ಶಿಷ್ಯರಾದ ಪದ್ಮಪಾದರೆಂದು ಪಂಡಿತರ ಅಭಿಪ್ರಾಯವು. ಆದರೆ ಇದಕ್ಕೆ ಯಾವ ಆಧಾರವಿಲ್ಲದ್ದರಿಂದ ಅದನ್ನು ನಂಬಲು ಸುತರಾಂ ಸಾಧ್ಯವಿಲ್ಲ. ಪಂಚ ಪಾದಿಕೆಯ ವ್ಯಾಖ್ಯಾನಕಾರರಾದ ಪ್ರಕಾಶಾತ್ಮಯತೀಂದ್ರರು ಕೂಡ ಪಂಚ ಪಾದಿಕೆಯ ಕರ್ತರು ಪದ್ಮಪಾದರೆಂದು ಎಲ್ಲಿಯೂ ಹೇಳಿರುವುದಿಲ್ಲ ಮತ್ತು ಅವರಲ್ಲಿ ಪ್ರತಿಪಾದಿಸಲ್ಪಟ್ಟಿರುವ ತತ್ವವೂ ಭಾಷ್ಯ ವಿರುದ್ಧವಾಗಿವೆ. ಅದರಲ್ಲಿ ಬ್ರಹ್ಮಜಗತ್ಕಾರಣವನ್ನು ನಿರಾಕರಿಸಿರುವದು, ಜಗನ್ಮಿಥ್ಯಾವಾದವನ್ನು ಪ್ರತಿಪಾದಿ ಸಿರುವುದು, ಮಾಯಾ ಅವಿದ್ಯೆಗಳು ಪರ್ಯಾಯ ಪದಗಳೆಂದು ನಿರೂಪಿ ಸಿರುವದು ಅಷ್ಟೇ ಅಲ್ಲ, ಇನ್ನೂ ಅನೇಕ ವಿಷಯಗಳು ವ್ಯಾಖ್ಯಾನವನ್ನನು ಸರಿಸಿ ನಿರೂಪಿಸಲ್ಪಟ್ಟು ಭಾಷ್ಯವಿರುದ್ಧವಾಗಿವೆ ಶಂಕರ ಭಾಷ್ಯಕ್ಕೆ ವಿರುದ್ಧ ವಾಗಿರುವ ಈ ವ್ಯಾಖ್ಯಾನವನ್ನು ಗುರುಶಂಕರನ ಪರಮ ಭಕ್ತನಾದ ಪದ್ಮಪಾದರ ರಚಿತವೆಂದು ಹೇಳುವುದು ಯುಕ್ತವೂ ಅಲ್ಲ. ಹಾಸ್ಯಾಸ್ಪದವೂ ಆಗಿದೆ

ಮತ್ತೊಂದು ವಿಷಯ. ಪಂಚಪಾದಿಕೆ ಎಂದರೆ ಐದು ಪಾದಗಳೆಂದರ್ಥ. ಬ್ರಹ್ಮ ಸೂತ್ರಗಳಲ್ಲಿ ನಾಲಕ್ಕು ಅಧ್ಯಾಯಗಳಿವೆ. ಒಂದೊಂದಧ್ಯಾಯದಲ್ಲಿ ನಾಲಕ್ಕು ಚರಣಗಳಿವೆ. ಹೀಗೆ ಪಂಚಪಾದಿಕೆ ಎಂದರೆ ಮೊದಲನೆ ಅಧ್ಯಾಯದ

ನಾಲಕ್ಕು ಚರಣಗಳು ಎರಡನೆಯ ಅಧ್ಯಾಯದ ಪ್ರಥಮ ಪಾದವೂ ಸೇರಿ ಐದು ಚರಣಗಳೂ ಇರಬೇಕಾಗಿತ್ತು. ಆದರೆ ಅದರಲ್ಲಿರುವದು ಪ್ರಥಮಾಧ್ಯಾಯದ ಮೊದಲಿನ ನಾಲುಕ್ಕು ಸೂತ್ರಗಳು ಮಾತ್ರವೇ. ಅವುಗಳಲ್ಲಿರುವುದು ಈ ವ್ಯಾಖ್ಯಾನ ಸಿದ್ಧಾಂತವೇ. ಆದರಿಂದ ಇದು ಪದ್ಮಪಾದರ ಕೃತಿಯಲ್ಲ.

ಇನ್ನೊಂದು ಭಾಮತಿ ವ್ಯಾಖ್ಯಾನವು ಈ ವ್ಯಾಖ್ಯಾನವನ್ನು ಮಾಡಿರುವನು ಮಹಾ ಪಂಡಿತೋತ್ತಮನಾದ ವಾಚಸ್ಪತಿ ಮಿಶ್ರನೆಂಬಾತನು. ಈತನು ಸಾಂಖ್ಯನು. ಸಾಂಖ್ಯಕಾರಿಕೆಗಳಿಗೆ ವ್ಯಾಖ್ಯಾನವನ್ನು ಬರೆದಿರುವನು ಆದರೆ ಸೂತ್ರಭಾಷ್ಯದಲ್ಲಿ ಭಾಷ್ಯಕಾರರು ಸಾಂಖ್ಯ ಸಿದ್ಧಾಂತವನ್ನು ಶ್ರುತಿ ವಿರುದ್ಧವೆಂದು ಹೇಳಿ ಅದನ್ನನುಸರಿಸಿದವರು ಅರಿಯದ ಮಂದಮತಿಗಳೆಂದೂ, ಮುಕ್ತಿಯನ್ನು ಕೆಡಿಸಿಕೊಳ್ಳುವರೆಂದೂ, ಅವರು ಈಶ್ವರನಿಲ್ಲವೆನ್ನುತ್ತಾರೆಂದೂ, ಜಗತ್ತು ಅವಿದ್ಯಾಕಲ್ಪಿತವೆಂದೂ ಜ್ಞಾನಬಾಧ್ಯವೆಂದೂ, ಮಾಯೆಯನ್ನು ಪ್ರಧಾನವೆಂದೂ ಜಡವೆಂದೂ ನಿರೂಪಿಸಿ ಅದೇ ಜಗತ್ಕಾರಣವೆನ್ನುತ್ತಾ ನಾನಾ ಜೀವರನ್ನು ಹೇಳುತ್ತಾ, ಸ್ವದೇಹ ಪರಿಚ್ಛಿನ್ನ ಪ್ರತ್ಯಗಾತ್ಮನೇ ಬ್ರಹ್ಮವೆಂದು ಹೇಳುವದರಿಂದ ಅವೆಲ್ಲವು ಶ್ರುತಿ ವಿರುದ್ಧವೆಂದು ತೀವ್ರವಾಗಿ ಖಂಡಿಸಿ ಸಾಂಖ್ಯ ಮತವನ್ನು ತಿರಸ್ಕರಿಸಿರುವರು ಎಲ್ಲರನ್ನು ಗದ್ದವನು ಸಾಂಖ್ಯನು. ಪ್ರಧಾನ ಮಲ್ಲನಿಬರ್ಹಣ ನ್ಯಾಯದಂತೆ ಶಂಕರನು ಸಾಂಖ್ಯವನ್ನು ಖಂಡಿಸಿ ಶಂಕರನುಂಟೆಂಬ ಈಶ್ವರವಾದವನ್ನು ಸಮರ್ಥಿಸಿರುವನು ಹೀಗಿರುವಾಗ ವಾಚಸ್ಪತಿ ಮಿಶ್ರನು ಶಂಕರಭಾಷ್ಯಾನುಸಾರವಾಗಿ ವ್ಯಾಖ್ಯಾನವನ್ನು ಬರೆಯುವನೇ ? ನಿರೀಶ್ವರವಾದವನ್ನು ಸಮರ್ಥಿಸಿರುವನು ಈರ್ಷ್ಯಾಸೂಯೆಗಳಿಂದ ವರ್ತಿಸುವನೇ ಹೊರತು ಈಶ್ವರನುಂಟೆಂದು ಹೇಳುವ ಭಾಷ್ಯವನ್ನನುಸರಿಸುವನೇ ? ಸ್ವಪಕ್ಷವನ್ನು ಸಾಧಿಸಿ ಭಾಷ್ಯವನ್ನು ಕಡೆಗಣಿಸಿ ತಿರಸ್ಕರಿಸಿರುವನಲ್ಲ ! ಎಷ್ಟು ಶೋಚನೀಯವಿದು ? ಸೂತ್ರಭಾಷ್ಯದಲ್ಲಿ ಸಾಂಖ್ಯನ ಪೂರ್ವ ಪಕ್ಷಗಳನ್ನು ಖಂಡಿಸಿ ಸ್ವಾಮಿ ಶಂಕರನು ಶ್ರುತಿ ಸಿದ್ಧಾಂತವನ್ನು ಸಮರ್ಥಿಸಿದ್ದರೂ ವಾಚಸ್ಪತಿ ಮಿಶ್ರನು ತನ್ನ ಪೂರ್ವ ಪಕ್ಷವನ್ನೇ ಶಂಕರ ಸಿದ್ಧಾಂತವೆಂದು ತನ್ನ ವ್ಯಾಖ್ಯಾನದಲ್ಲಿ ಬರೆದಿರುವದೇ ಭಾಷ್ಯವನ್ನು ತಿರಸ್ಕರಿಸಿರುವನೆಂಬುದಕ್ಕೆ ಸಾಕಾದಷ್ಟು ನಿದರ್ಶನವೆಂದು ಧಾರಾಳವಾಗಿ ಹೇಳಬಹುದಾಗಿದೆ

ಆದರಿಂದ ಭಾಷ್ಯ ವ್ಯಾಖ್ಯಾನಗಳಿಗೆ ಅತಿ ಪ್ರಾಧಾನ್ಯ ವಿಷಯಗಳಾಗಿರುವ ಬ್ರಹ್ಮ, ಮಾಯಾ, ಅವಿದ್ಯೆ, ಜಗತ್ತು, ತತ್ತ್ವಮಸಿ ವಾಕ್ಯಾರ್ಥ, ತುದಿಗೆ ಅದ್ವೈತ ಸಿದ್ಧಾಂತ—ಇವುಗಳ ಸ್ವರೂಪ ನಿರ್ಣಯದಲ್ಲಿ ವ್ಯತ್ಯಾಸವು ಪೂರ್ವ ಪಶ್ಚಿಮಗಳಂತೆ ಪರಸ್ಪರ ವಿರುದ್ಧವಾಗಿರುವುದು. ವಿಷಯ ಪ್ರತಿಪಾದನೆ ಯಲ್ಲಿಯೇ ಇಷ್ಟೊಂದು ಭೇದವಿರುವಾಗ ಅದ್ವೈತ ಸಿದ್ಧಾಂತವು ಭಿನ್ನಿಸುವದು ಸಹಜವಾಗಿಯೇ ಇದೆ ಹೀಗಿರುವಾಗ ಶಂಕರ ಭಾಷ್ಯ ಸಿದ್ಧಾಂತವನ್ನು ವ್ಯಾಖ್ಯಾನದಿಂದ ನಿರ್ಣಯಿಸುವುದು ಯಾವ ನ್ಯಾಯವು ? ಶಂಕರ ಭಾಷ್ಯವು ಸ್ವತಃ ತಾನೇ ಸಿದ್ಧಾಂತವನ್ನು ನಿಸ್ಸಂದಿಗ್ಧವಾಗಿ ತಿಳಿಸುತ್ತಿರುವಲ್ಲಿ ಅದನ್ನು ಅನ್ಯ ವ್ಯಾಖ್ಯಾನದಿಂದ ನಿರ್ಣಯಿಸುವುದು ಎಷ್ಟು ಅನ್ಯಾಯವು ? ಇದಲ್ಲದೆ ವ್ಯಾಖ್ಯಾನಗಳು ಏಕ ಕಂಠವಾಗಿ ಒಂದೇ ಸಿದ್ಧಾಂತವನ್ನು ತಿಳಿಸದೆ ಅತ್ಯಂತ ವಿರುದ್ಧವಾದ ಪ್ರಕ್ರಿಯೆಗಳನ್ನು ಭಾಷ್ಯ ಸಿದ್ಧಾಂತವೆಂದು ತಿಳಿಸುತ್ತವೆ, ವ್ಯಾಖ್ಯಾನವು ಭಾಷ್ಯ ವಿರುದ್ಧವಾಗಿರುವಾಗ ವ್ಯಾಖ್ಯಾನವನ್ನು ತಿರಸ್ಕರಿಸುವದು ಯುಕ್ತವು. ಇದು ಕೆಲವರ ಪಂಡಿತರ ಅಭಿಪ್ರಾಯವು ಆದರಿಂದ ಕೇವಲ ಭಾಷ್ಯದಿಂದಲೇ ತತ್ತ್ವ ಸಿದ್ಧಾಂತವನ್ನರಿಯುವದು ಭಕ್ತರಾದ ಮುಮುಕ್ಷುಗಳಿಗೆ ಕರ್ತವ್ಯವು ಶ್ರೇಯಸ್ಕರವು.

ವೇದಾಂತ ಸಿದ್ಧಾಂತ ಜ್ಞಾನದಿಂದಲೆ ಮೋಕ್ಷ ಪ್ರಾಪ್ತಿಯು ಅನ್ಯ ದಾರಿ ಯಾವುದೂ ಇಲ್ಲ ಅದು ಅನುಭವ ವೇದ್ಯವು ಶ್ರುತಿ ಸಮ್ಮತ ಸಮ್ಯಕ್ ಜ್ಞಾನವನ್ನು ಹೊಂದಬೇಕು. ಅದು ಭಾಷ್ಯ ಶ್ರವಣಾದಿಗಳಿಂದಲೇ ಲಭ್ಯವು, ಭಾಷ್ಯಕಾರರು ಸಾಂಖ್ಯಾದಿ ದರ್ಶನಗಳಲ್ಲಿರುವ ದೋಷಗಳನ್ನು ತೋರಿಸಿ ಅವುಗಳನ್ನು ಖಂಡಿಸಿ ಶ್ರುತ್ಯಂತ ಸಿದ್ಧಾಂತವನ್ನು ತಮ್ಮ ಭಾಷ್ಯದಲ್ಲಿ ಬೋಧಿ ಸಿರುವದರಿಂದ ವೇದಾಂತ ಸಿದ್ಧಾಂತವನ್ನರಿಯಲು ಪ್ರಸ್ಥಾನತ್ರಯ ಭಾಷ್ಯವನ್ನೇ ಪ್ರಮಾಣವಾಗಿ ಸ್ವೀಕರಿಸಬೇಕು.

ವ್ಯಾಖ್ಯಾನ ಸಿದ್ಧಾಂತದಲ್ಲಿರುವ ದೋಷಗಳನ್ನರಿಯದೆ ವ್ಯಾಖ್ಯಾನ ನಿರೂ ಪಿಸುವ ಅದ್ವೈತ ಸಿದ್ಧಾಂತವು ಶ್ರುತಿಸ್ಮೃತಿ ಭಾಷ್ಯಾನುಭವಗಳಿಗೆ ಹೇಗೆ ವಿರುದ್ಧ ವೆಂಬುದನ್ನು ತಿಳಿಯಲಾಗುವುದಿಲ್ಲ, ಅದರಿಂದ ಮೊದಲು ವ್ಯಾಖ್ಯಾನವು ಯಾವ ಯಾವ ಪ್ರಾಮುಖ್ಯ ವಿಷಯಗಳಲ್ಲಿ ಭಾಷ್ಯ ವಿರುದ್ಧವಾಗಿ ಅವುಗಳ ತತ್ತ್ವ ಪ್ರತಿ

ಪಾದನೆಯನ್ನು ಮಾಡಿರುವದೆಂಬುದನ್ನು ತೋರಿಸಿ, ಬಳಿಕ ವ್ಯಾಖ್ಯಾನವು ನಿರೂಪಿಸಿರುವ ಅದ್ವೈತ ಸಿದ್ಧಾಂತವು ಹೇಗೆ ಭಾಷ್ಯ ವಿರುದ್ಧವೆಂಬುದನ್ನು ವಿವರಿಸಿ, ತದನಂತರ ಭಾಷ್ಯ ರೀತ್ಯಾ ಅದ್ವೈತ ಸಿದ್ಧಾಂತ ಕ್ರಮವು ನಿರೂಪಿಸಲ್ಪಡುವುದು.

ಪೂಜ್ಯಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ಮುಮುಕ್ಷು ಜನ ಹಿತಾರ್ಥವಾಗಿ ವ್ಯಾಖ್ಯಾನಕಾರರು ಕೆಲವು ವಿಷಯಗಳಲ್ಲಿ ಗುರುಭಾಷ್ಯಕ್ಕೆ ವಿರುದ್ಧವಾಗಿ ತತ್ತ್ವ ಪ್ರತಿಪಾದನೆ ಮಾಡಿರುವರೆಂಬುದನ್ನು ಸೂಚಿಸಿ ಮಾರ್ಗದರ್ಶಿಗಳಾಗದೆ ಇದ್ದಿದ್ದರೆ, ಸಂಸ್ಕೃತ ಭಾಷಾ ಜ್ಞಾನವಿಲ್ಲದ ಕನ್ನಡ ಮುಮುಕ್ಷುಗಳಿಗೆ ಅನುಕೂಲವಾಗಿ ಪ್ರಸ್ಥಾನತ್ರಯ ಭಾಷ್ಯಕ್ಕೆ ಕನ್ನಡಾರ್ಥವಾದವನ್ನು ಮಾಡದೆ ಇದ್ದಿದ್ದರೆ, ಗುರುಭಾಷ್ಯವನ್ನು ನಾವು ಅನುಸರಿಸುತ್ತಿಲ್ಲವೆಂಬ ಅಮೂಲ್ಯ ಪರಮ ರಹಸ್ಯ ರತ್ನವು ನಮಗ ಲಭ್ಯವಾಗುತ್ತಿರಲಿಲ್ಲ. ಅದರ ಲಾಭಕ್ಕೆ ಯತ್ನವೂ ಹುಟ್ಟುತ್ತಿರಲಿಲ್ಲ ಶ್ರೀ ಸ್ವಾಮಿಗಳವರು ಈ ದೋಷ ಪರಿಹಾರಕ್ಕೆ ದಾರಿಯನ್ನು ಏಕೆ ಮಾಡಲಿಲ್ಲವೋ ಗೊತ್ತಾಗುವದಿಲ್ಲ ಈಗ ಅದನ್ನು (ಗುರು ಭಾಷ್ಯವನ್ನು) ಪಡೆಯಲು (ವಿಶ್ವ ಪ್ರಯತ್ನವು) ನಡೆಯಬೇಕಾಗಿದೆ. ನಮ್ಮ ಮಹಾ ಗುರುಸ್ವಾಮಿಗಳವರಿಗೆ ಸಂಸ್ಕೃತ ಭಾಷಾ ಪರಿಚಯವಿಲ್ಲದ ಕನ್ನಡ ಬಡ ಮುಮುಕ್ಷುಗಳ ಮೇಲೆ ಅನುಗ್ರಹವು ಎಂದುಂಟಾಗುವುದೋ ? ಭಾಷ್ಯ ಸಿದ್ಧಾಂತವನ್ನು ಎಂದು ತಿಳಿಸಿ ಕೊಡುವರೋ ? ನಮ್ಮ ಭಾಗ್ಯವೆಂತಿಹುದೋ ? ಶಂಕರನು ರಕ್ಷಿಸಲಿ ! ಭಾಷ್ಯ ವಿರುದ್ಧವಾಗಿ ವ್ಯಾಖ್ಯಾನವನ್ನು ಯಾವ ಮಹಾ ಪಂಡಿತೋತ್ತಮನು ಬರೆದಿದ್ದರೂ ನಮಗೆ ಬೇಡ ನಮಗೆ ನಮ್ಮ ಗುರು ಶಂಕರನ ಭಾಷ್ಯವು ಒಂದೇ ಸಾಕು. ಅದೇ ಬೇಕು. ಇದೇ ನಮ್ಮ ದೃಢ ನಿಶ್ಚಯವು.

ವ್ಯಾಖ್ಯಾನ ತತ್ತ್ವವು ಜಗದ್ವಿಷಯವನ್ನು ಅವಿದ್ಯಾ ಕಲ್ಪಿತವೆಂದು ಹೇಳಿರುವದು ಶ್ರುತಿ ಭಾಷ್ಯ ವಿರುದ್ಧವಾದ್ದರಿಂದಲೂ, ಪಂಡಿತರು ಇದನ್ನೇ ಪೋಷಿಸುತ್ತಿರುವವರಿಂದಲೂ, ಇದು ಒಂದುಸಾವಿರ ವರುಷಗಳಿಂದ ಜೀವಿಸಿರುವುದರಿಂದಲೂ, ಪದೇಪದೇ ವಿಧವಿಧವಾಗಿ ಈ ವಾದವನ್ನು ಖಂಡಿಸಿರುವದನ್ನು ಪುನರುಕ್ತಿ ದೋಷವೆಂದೆಣಿಸದೇ ಮುಮುಕ್ಷು ಜನ ಹಿತಾರ್ಥವಾಗಿ ಅನೇಕ ವಿ

ವಾಗಿ ವಿವರಿಸಲ್ಪಟ್ಟಿದೆ ಎಂದು ಭಕ್ತರು ಸಮಾಧಾನವನ್ನು ಹೊಂದಬೇಕೆಂದು ವಿನಯ ಪ್ರಾರ್ಥನೆ. ಬ್ರಹ್ಮ ಜಗತ್ಕಾರಣತ್ವವನ್ನು ನಿರಾಕರಿಸಿ ಬ್ರಹ್ಮಸ್ವರೂಪ ವನ್ನು ವಿರೂಪಗೊಳಿಸಿರುವುದು ಭಕ್ತರಿಗೆ ಎಷ್ಟು ಅನ್ಯಾಯ ? ವ್ಯಾಖ್ಯಾನವು ಶ್ರುತಿಗಳನ್ನು ಪ್ರಮಾಣವಾಗಿ ಸ್ವೀಕರಿಸಿರುವದಿಲ್ಲ. ಭಾಷ್ಯಾಭಿಪ್ರಾಯಕ್ಕೆ ವಿರುದ್ಧವಾಗಿ ವ್ಯಾಖ್ಯಾನ ಮಾಡಿರುತ್ತದೆ ಹೀಗಿರುವದರಿಂದ ಇದು ಶಂಕರ ಸಿದ್ಧಾಂತವೆಂದು ನಾವು ಹೇಗೆ ತಿಳಿಯಲು ಸಾಧ್ಯ ?

—ಗ್ರಂಥಕರ್ತ

ಸಂಕೇತಗಳು :

1. ಬೃ ಉ = ಬೃಹದಾರಣ್ಯೋಪನಿಷತ್ತು
2. ತೈ ಉ = ತೈತ್ತೀರಿಯೋಪನಿಷತ್ತು
3. ಮುಂ.ಉ. = ಮುಂಡಕೋಪನಿಷತ್ತು
4. ಛಾಂ.ಉ = ಛಾಂದೋಗ್ಯೋಪನಿಷತ್ತು
5. ಕೇ.ಉ = ಕೇನೋಪನಿಷತ್ತು
6. ಕಠ = ಕಠೋಪನಿಷತ್ತು
7. ಪ್ರ: ಉ = ಪ್ರಶ್ನೋಪನಿಷತ್ತು
8. ಮಾಂ.ಉ = ಮಾಂಡುಕ್ಯೋಪನಿಷತ್ತು

ಶ್ರೀ

ಜಯಗುರು ಶಂಕರ ಭಗರ್ವ

## ಭಾಷ್ಯ ವ್ಯಾಖ್ಯಾನಗಳಿಗೆ ಇರುವ ಪರಸ್ಪರ ಭೇದ ನಿರೂಪಣೆ

### —. 1. ಬ್ರಹ್ಮ ಸ್ವರೂಪ ನಿರ್ಣಯ .—

1. "ಅಧೀಹಿ ಭಗವೋ ಬ್ರಹ್ಮೇತಿ । ತಗ್ ಹೋವಾಚ । ಯತೋವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿಸಂವಿಶಂತಿ । ತದ್ವಿ ಜಿಜ್ಞಾಸಸ್ವ । ತದ್‌ಬ್ರಹ್ಮೇತಿ" ॥ ಎಂಬ ಶ್ರುತಿ (ತೈ· ಉ. ವ 3: ಮಂ 3 ) ಯಲ್ಲಿ ಗುರುವನ್ನು ಶಿಷ್ಯನು ಬ್ರಹ್ಮ ಸ್ವರೂಪವನ್ನು ಬೋಧಿಸಬೇಕೆಂದು ಕೇಳಲು ಗುರುನಾಥನು ಅವನನ್ನು ಕುರಿತು "ಯಾವದರಿಂದ ಈ ಭೂತಗಳು ಹುಟ್ಟಿ, ಜೀವಿಸುತ್ತಾ, ನಿಯತ ಕಾಲಾನಂತರ ಯಾವನನ್ನು ಸೇರಿ ತಾದಾತ್ಮ್ಯವನ್ನು ಹೊಂದುತ್ತವೆಯೋ ಅದೇ ಬ್ರಹ್ಮವೆಂದೂ ಅದನ್ನೇ ಜಿಜ್ಞಾಸೆಯನ್ನು ಮಾಡಿ ಅರಿಯಬೇಕೆಂದು ಬೋಧಿಸಿರುವನು." "ಬ್ರಹ್ಮ ವಿದಾಪ್ನೋತಿ ಪರಂ" ಎಂಬ ಶ್ರುತಿ ರೀತ್ಯಾ (ತೈ: ಉ: 2 ವ. 1 ಮಂ) ಮುಕ್ತಿಹೇತುವಾಗಿರುವದರಿಂದ ಬ್ರಹ್ಮವನ್ನರಿಯಲು ಜಗತ್ಸೃಷ್ಟ್ಯಾದಿಗಳಿಗೆ ಬ್ರಹ್ಮ ಕಾರಣತ್ವವು ಸ್ವರೂಪ ಲಕ್ಷಣವೆಂದು ಭಾಷ್ಯವು ಬೋಧಿಸುತ್ತದೆ. ಯಾವದು ಜಗತ್ಕಾರಣವೋ ಅದೇ ಬ್ರಹ್ಮವು ಜಗತ್ಕಾರಣವಲ್ಲದ್ದು ಬ್ರಹ್ಮವೆನಿಸದು.

2. ಭಾಷ್ಯವು ಪ್ರಥಮ ಸೂತ್ರದಲ್ಲಿ ಬ್ರಹ್ಮವನ್ನು ಜಿಜ್ಞಾಸೆಯನ್ನು ಮಾಡಿ ಅರಿಯ ಬೇಕೆಂದು ಹೇಳಿ, "ಜನ್ಮಾದ್ಯಸ್ಯಯತಃ" ಎಂಬ ಎರಡನೆಯ ಸೂತ್ರದಲ್ಲಿ "ಯತಃ" ಎಂಬ ಶಬ್ದಕ್ಕೆ 'ಯಾವದರಿಂದ' ಎಂಬರ್ಥವನ್ನು ಹೇಳಿ ಅದು ಬ್ರಹ್ಮ ಕಾರಣತ್ವವನ್ನು ತಿಳಿಸುವದೆಂದೂ, ನಾನಾ ನಾಮರೂಪಗಳಿಂದಲೂ, ಕರ್ತೃ ಭೋಕ್ತೃಗಳಿಂದಲೂ, ದೇಶ ಕಾಲ ನಿಮಿತ್ತಗಳನ್ನನುಸರಿಸಿ ಕ್ರಿಯಾಫಲಗಳಿಗಾಶ್ರಯವಾಗಿರುವದರಿಂದಲೂ, ಮನಸ್ಸಿನಿಂದಲೂ ಊಹಿಸಲಾಗದ ರಚನೆಯ ಸ್ವರೂಪ ಉಳ್ಳದ್ದಾಗಿರುವ ಈ ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳು ಯಾವ ಸರ್ವಜ್ಞ ಸರ್ವ ಶಕ್ತನಿಂದ ಆಗುತ್ತಿರುವವೋ, ಅವನೇ

ಬ್ರಹ್ಮವೆಂದು ತಿಳಿಯ ಬೇಕು" ಎಂದು ಬೋಧಿಸುತ್ತದೆ. (ಬ್ರ: ಸೂ 1-1-2.)

ಇದೂ ಅಲ್ಲದೆ ಮೇಲೆ ಹೇಳಿದ ವಿಶೇಷಣಗಳುಳ್ಳ ಜಗತ್ತಿಗೆ ಮೇಲೆ ಹೇಳಿರುವ ವಿಶೇಷಣಗಳುಳ್ಳ ಈಶ್ವರನನ್ನು ಬಿಟ್ಟರೆ ಬೇರೆ ಇನ್ನಾವುದರಿಂದಲೂ—ಎಂದರೆ ಅಚೇತನ ಪ್ರಧಾನದಿಂದಾಗಲಿ, ಅಣುಗಳಿಂದಾಗಲಿ, ಅಭಾವದಿಂದಾಗಲಿ, ಸಂಸಾರಿಯಿಂದಾಗಲಿ, ಸ್ವಭಾವದಿಂದಾಗಲಿ, ಜಗತ್ ಸೃಷ್ಟ್ಯಾದಿಗಳಿಗೆ ಕಾರಣ ಆಗುವುದಿಲ್ಲವೆಂದು ಹೇಳಿ ಬ್ರಹ್ಮ ಕಾರಣತ್ವವನ್ನು ಬಿಟ್ಟು ಅನ್ಯ ಕಾರಣವನ್ನು ಭಾಷ್ಯವು ನಿಷೇಧಿಸಿ ಬೋಧಿಸುತ್ತದೆ.

3. (a) "ಗತಿ ಸಾಮಾನ್ಯಾತ್" ಎಂಬ ಸೂತ್ರ ರೀತ್ಯಾ (ಬ್ರ. ಸೂ: 1–1–10) ಎಲ್ಲಾ ವೇದಾಂತಗಳು ಚೇತನ ಕಾರಣತ್ವವನ್ನೇ ಹೇಳುತ್ತಿವೆ ಎಂದು ಭಾಷ್ಯವು ಬೋಧಿಸಿ ಗತಿ ಸಾಮಾನ್ಯದಿಂದ ಸರ್ವಜ್ಞನಾದ ಬ್ರಹ್ಮವೇ ಜಗತ್ತಿಗೆ ಕಾರಣವೆಂದು ಪ್ರತಿಪಾದಿಸುತ್ತದೆ.

4 "ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್" ಎಂಬ ಸೂತ್ರ ರೀತ್ಯಾ (ಬ್ರ: ಸೂ: 1–3–41.) ಭಾಷ್ಯವು "ಬ್ರಹ್ಮವನ್ನು ಬಿಟ್ಟರೆ ಮತ್ತೆ ಯಾವದೂ ನಾಮ ರೂಪಕಗಳಿಗಿಂತ ಬೇರೆಯಾದ್ದು ಇರುವ ಹಾಗಿಲ್ಲ . ಏಕೆಂದರೆ ಕಾರ್ಯ ಸಮೂಹವೆಲ್ಲವು ನಾಮ ರೂಪಗಳಿಂದಲೇ ವ್ಯಾಕೃತವಾಗಿರುತ್ತದೆ. ನಾಮ ರೂಪಗಳನ್ನು ತಡೆಯಿಲ್ಲದೆ ನಿರ್ವಾಹ ಮಾಡಲು ಶಕ್ತಿಯುಳ್ಳದ್ದು ಬ್ರಹ್ಮಕ್ಕಿಂತ ಬೇರೆಯಾಗಿ ಯಾವದರಲ್ಲಿಯೂ ಇರುವುದಿಲ್ಲ" ವೆಂದು ಬೋಧಿಸುತ್ತದೆ.

5. "ಶ್ರುತತ್ವಾಚ್ಚ" ಎಂಬ ಸೂತ್ರ ರೀತ್ಯಾ (ಬ್ರ. ಸೂ: 1–1–11) ಭಾಷ್ಯವು "ಸರ್ವಜ್ಞನಾದ ಬ್ರಹ್ಮವೇ ಜಗತ್ತಿಗೆ ಕಾರಣವೇ ಹೊರತು ಅಚೇತನ ಪ್ರಧಾನವಾಗಲಿ ಬೇರೆ ಇನ್ನಾವದಾಗಲಿ ಕಾರಣವಲ್ಲವೆಂದು ಸಿದ್ಧವಾಯಿತು" ಎಂದು ಬೋಧಿಸುತ್ತದೆ

6. ಬ್ರಹ್ಮ ಸೂತ್ರದ ಒಂದನೆಯ ಅಧ್ಯಾಯದಲ್ಲಿ ಸರ್ವಜ್ಞನಾದ ಸರ್ವೇಶ್ವರನು ಜಗದುತ್ಪತ್ತ್ಯಾದಿಗಳಿಗೆ ಕಾರಣವೆಂದೂ, ಅವನೇ ನಮ್ಮೆಲ್ಲರ

ಆತ್ಮನೆಂದೂ. ವೇದಾಂತ ವಾಕ್ಯಗಳ ಸಮನ್ವಯ ಮಾಡಿ ಅದನ್ನು ತಿಳಿಸಲಾಯಿತೆಂದೂ ಪ್ರಧಾನವಾದಿಗಳಾದ ಸಾಂಖ್ಯ ಮತವನ್ನು ಖಂಡಿಸಿ ಭಾಷ್ಯವು ಬ್ರಹ್ಮವೇ ಜಗತ್ಕಾರಣವೆಂದು ಶ್ರುತ್ಯಾಧಾರಗಳಿಂದ ಬೋಧಿಸಿರುವದು.

7. "ಜನ್ಮಾದಸ್ಯ ಯತಃ" ಎಂಬ ಸೂತ್ರದಿಂದ ಹಿಡಿದು "ಶ್ರುತತ್ವಾಚ" ಎಂಬ ಸೂತ್ರದ ವರೆಗೂ ಯಾವ ವೇದಾಂತ ವಾಕ್ಯಗಳು ಸರ್ವಜ್ಞ ಸರ್ವ ಶ್ತಕನಾದ ಈಶ್ವರನು ಜಗತ್ಕಾರಣನೆಂದು ತಿಳಿಸುತ್ತವೆಯೋ ಅದನ್ನು ಯುಕ್ತಿಯಿಂದಲೂ, ನ್ಯಾಯದಿಂದಲೂ ತಿಳಿಸಲಾಗಿದೆ ಎಂದು ಭಾಷ್ಯವುಬೋಧಿಸುತ್ತದೆ.

8 "ಸರ್ವಧರ್ಮೋಪ ಪತ್ತೇಶ್ಚ" ಎಂಬ ಸೂತ್ರ ರೀತ್ಯಾ (ಬ್ರ.ಸೂ:2–1–37)ಬ್ರಹ್ಮವು ಸರ್ವಜ್ಞ ಸರ್ವಶಕ್ತ ಮಹಾಮಾಯಾ ಸ್ವರೂಪನದರಿಂದ ಎಲ್ಲಾ ಕಾರಣ ಧರ್ಮಗಳು ಬ್ರಹ್ಮಕ್ಕೆ ಉಪಪನ್ನವಹುದೆಂದು ಭಾಷ್ಯವು ಬೋಧಿಸುತ್ತದೆ.

9. ಭಾಷ್ಯವು "ಬ್ರಹ್ಮವು ನಿರ್ವಿಶೇಷವಾದರೂ ಸರ್ವಜ್ಞ ಸರ್ವಶಕ್ತನಾದ್ದರಿಂದ ಬ್ರಹ್ಮವೇ ಜಗತ್ಕಾರಣ"ವೆಂದು ಬೋಧಿಸುತ್ತದೆ. (ಕಠ ಉ:2–3–12).

ಈ ರೀತಿಯಲ್ಲಿ ಭಾಷ್ಯವು ಬ್ರಹ್ಮವೇ ಜಗತ್ಕಾರಣವೆಂದು ಬೋಧಿಸಿ (ಬ್ರಹ್ಮಸೂತ್ರದ 555 ಸೂತ್ರಗಳ ಪೈಕಿ 104 ಸೂತ್ರಗಳಲ್ಲಿ) ಬ್ರಹ್ಮಕಾರಣತ್ವವನ್ನು ಪ್ರತಿಪಾದಿಸಿದ್ದರೂ ವ್ಯಾಖ್ಯಾನವು ಭಾಷ್ಯವನ್ನು ಧಿಕ್ಕರಿಸಿ, ಬ್ರಹ್ಮದ ಜಗತ್ಕಾರಣತ್ವವನ್ನೂ ನಿರಾಕರಿಸಿ, ಸೃಷ್ಟಿ ಶ್ರುತಿಗಳನ್ನುಪೇಕ್ಷಿಸಿ, ಬ್ರಹ್ಮವು ಕೂಟಸ್ಥ ನಿತ್ಯವೆಂದೂ ಅದೇ ಜಗತ್ತಿಗೆ ಉಪಾದಾನ ಕಾರಣವೆಂದೂ ಶ್ರುತಿಯಿಂದ ತಿಳಿದುಬರುವುದರಿಂದ ಬ್ರಹ್ಮವು ಅವಿದ್ಯೆಯಿಂದ ಇಂಥ ಸಾಮರ್ಥ್ಯವನ್ನು ಪಡೆದು ಜಗತ್ತಿಗೆ ಕಾರಣವಾಗಿರುವದೆಂದು ಹೇಳುತ್ತಾ ಶ್ರುತಹಾನ್ಯ ಶ್ರುತಕಲ್ಪನಾದೋಷಯುಕ್ತವಾಗಿರುವದು.

ಮತ್ತು ವ್ಯಾಖ್ಯಾನವು ಜಗತ್ತು ಅತ್ಯಂತಾಭಾವವೆಂದೂ ಸೃಷ್ಟ್ಯಾದಿಗಳಿಲ್ಲವೆಂದೂ ಹೀಗಿದನ್ನು ಸಾಧಿಸಲು ಜಗತ್ತು ಅವಿದ್ಯಾಕಲ್ಪಿತವೆಂದೂ ಮಿಥ್ಯಾಭೂತವೆಂದೂ ಜ್ಞಾನಬಾಧ್ಯವೆಂದೂ ನಿರೂಪಿಸುತ್ತದೆ. ಅದರಿಂದ ವ್ಯಾಖ್ಯಾನವು

ಗುರುಭಾಷ್ಯವನ್ನು ಅನುಸರಿಸಿಲ್ಲವೆಂದು ಸ್ಪಷ್ಟವಾಗುತ್ತಿದೆ, ಅಷ್ಟೇ ಅಲ್ಲ ಗುರುಭಾಷ್ಯವನ್ನು ಛಿದ್ರಿಸಲು ಮಾಡಿರುವ ಕಲ್ಪನಾ ಮಾತ್ರವಿದು ಹೇಗೆಂದರೆ ಅವಿದ್ಯೆಯು ಪ್ರವರ್ತಕವೇ ಅಲ್ಲ. ಅದು ಬರಿಯ ಆವರಣವು. ಅದು ಉಪಾದಾನ ಕಾರಣವಾಗಲಾರದು, ಅದು ಜಗತ್ಸೃಷ್ಟ್ಯಾದಿಗಳನ್ನು ಮಾಡುವ ಸಾಮರ್ಥ್ಯವನ್ನು ಪಡೆಯುವದೆಂದು ಹೇಳುವದು ಹಾಸ್ಯಾಸ್ಪದವು ಸ್ಮೃತಿಶ್ರುತಿಗಳನ್ನು ತಿರಸ್ಕರಿಸಿರುವದು ಸ್ಪಷ್ಟವು "ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್" ಎಂಬ ಸೂತ್ರ ರೀತ್ಯಾ (ಬ್ರ: ಸೂ. 1–4–23 ) ಭಾಷ್ಯವು ಬ್ರಹ್ಮವು ನಿಮಿತ್ತ ಕಾರಣವೆಂದೂ, ತನ್ನ ಸ್ವರೂಪ ಭೂತವಾದ ಪ್ರಕೃತಿಯು ಉಪಾದಾನ ಕಾರಣವೆಂದು ಅದರಿಂದ ಸೃಷ್ಟ್ಯಾದಿಗಳಿಗೆ ಬ್ರಹ್ಮವು ಅಭಿನನ್ನಿಮಿತ್ತೋಪಾದಾನ ಕಾರಣವೆಂದು ಬೋಧಿಸುವದನ್ನು ತಿರಸ್ಕರಿಸಿ ಮೇಲೆ ಹೇಳಿರುವಂತೆ ಅವಿದ್ಯೆಯು ಉಪಾದಾನವೆಂದು ಕಲ್ಪಿಸಿರುವುದು ಭಾಷ್ಯವನ್ನು ವ್ಯಾಖ್ಯಾನವು ತಿರಸ್ಕರಿಸಿರುವದೆನ್ನುವುದಕ್ಕೆ ತಕ್ಕ ನಿದರ್ಶನವಾಗಿರುತ್ತದೆ. ಬ್ರಹ್ಮವು ಜಗತ್ತಿಗೆ ಅಭಿನ್ನನಿಮಿತ್ತೋಪಾದಾನ ಕಾರಣವೆಂದಂಗೀಕರಿಸಿ ಜಗತ್ತು ಮಿಥ್ಯಾಭೂತವೆಂದು ಹೇಳುವದು ವಿಪ್ರತಿಷಿದ್ಧವು, "ನಿತ್ಯನಿವೃತ್ತಾವಿದ್ಯತ್ವಾತ್ ಈಶ್ವರಸ್ಯ" ಎಂದು ಹೇಳುವ ಭಾಷ್ಯಾ ರೀತ್ಯಾ (ಬ್ರ. ಸೂ: 3–2–9.) ಬ್ರಹ್ಮವು ಯಾವಾಗಲೂ ಅವಿದ್ಯೆಯೇ ಇಲ್ಲದವನೆಂದು ಬೋಧಿಸಿರುವುದನ್ನು ಧಿಕ್ಕರಿಸಿ ವ್ಯಾಖ್ಯಾನವು ಸ್ವಪಕ್ಷವನ್ನು ಸಾಧಿಸಲು ಬ್ರಹ್ಮವು ಅವಿದ್ಯೆಯುನ್ನುಳ್ಳದ್ದೆಂದು ಹೇಳಿರುವುದು, ಅದು ಉಪಾದಾನ ಕಾರಣವೆಂದೂ ಹೇಳಿರುವದು; ಹೊಂದದ ಕಲ್ಪನಾ ಮಾತ್ರವಿದು. ಹಾಸ್ಯಾಸ್ಪದವು. (ಅವಿದ್ಯಾನ್ಯೈವ ಪ್ರವರ್ತಿಕಾ। ವಸ್ತು ಸ್ವರೂಪಾ ವರಣಾತ್ಮಿಕಾ ಹಿಸಾ ಪ್ರವರ್ತಕ ಬೀಜತ್ವಂ ತುಪ್ರತಿಪದ್ಯತೇ॥ ಎಂದು ಭಾಷ್ಯಾ ) ಬೃ: ಉ: 1–4–17.

ಅದರಿಂದ ಬ್ರಹ್ಮವೇ ಜಗತ್ಕಾರಣವು ಎಂಬುದು ಭಾಷ್ಯ ಸಿದ್ಧಾಂತವು. ತದ್ವಿರುದ್ಧವಾಗಿ ನಿರೂಪಿಸುವ ಜಗತ್ತು ಅವಿದ್ಯಾಕಲ್ಪಿತವೆನ್ನುವ ವ್ಯಾಖ್ಯಾನವು ತಿರಸ್ಕರಣೀಯವು.

—೨. ಭಾಷ್ಯರೀತ್ಯಾ 'ಬ್ರಹ್ಮ ಸರ್ವಜ್ಞ ಸ್ವರೂಪನೆಂಬ ನಿರೂಪಣೆ—

1. "ಯಃ ಸರ್ವಜ್ಞಸ್ಸರ್ವವಿತ್" ಎಂಬ ಶ್ರುತಿ ರೀತ್ಯಾ (ಮುಂ· ಉಪ:

1–1–9) ಭಾಷ್ಯವು ಬ್ರಹ್ಮವು ಸರ್ವಜ್ಞ ಸ್ವರೂಪವೆಂದೂ, ಆ ಸರ್ವಜ್ಞತ್ವ ಲಕ್ಷಣವಾದ ಪ್ರಜ್ಞೆಯು ಯಾವಾಗಲೂ ವಿಯೋಗವಾಗುವುದಲ್ಲವೆಂತಲೂ ಮತ್ತು ಅದು ಸವಿತೃ ಪ್ರಕಾಶದಂತೆಯೂ ಅಗ್ನಿಯ ಉಷ್ಣದಂತೆಯೂ ಬ್ರಹ್ಮ ಸ್ವರೂಪಾ ವ್ಯತಿರಿಕ್ತವೆಂದೂ ಬ್ರಹ್ಮ ಸ್ವರೂಪವೇ ಎಂದೂ ಬೋಧಿಸುತ್ತದೆ.

(1) ಸರ್ವಜ್ಞತ್ವ ಲಕ್ಷಣಯಾ ಪ್ರಜ್ಞಯಾ ನಿತ್ಯಂ ಅವಿಯೋಗಾತ್॥ ಎಂದು ಭಾಷ್ಯ (ಬ್ರ: ಸೂ 1-3–42) (2) ಯತ್ತು ಬ್ರಹ್ಮಣೋ ವಿಜ್ಞಾನಂ ತತ್ ಸವಿತೃ ಪ್ರಕಾಶವತ್, ಅಗ್ನ್ಯೌಷ್ಣವಚ್ಚ ಬ್ರಹ್ಮ ಸ್ವರೂಪಾ ವ್ಯತಿರಿಕ್ತಂ ಸ್ವರೂಪಮೇವತತ್॥ ಎಂದು ಭಾಷ್ಯ. ತೈ. ಉ 2–1), ಸಃಸರ್ವಜ್ಞಃ ಸ್ವಾಭಾವ್ಯಾತ್॥ ಎಂದು ಭಾಷ್ಯ (ಐ ಉ.)

2. ಬ್ರಹ್ಮವು ಜ್ಞಾನಸ್ವರೂಪವನ್ನೊಂಗೀಕರಿಸಿ ಸರ್ವಜ್ಞನಲ್ಲವೆಂದು ಹೇಳುವುದು ವಿಪ್ರತಿಷಿದ್ಧವೆಂದು ಭಾಷ್ಯವು ಬೋಧಿಸುತ್ತದೆ. (ಯಸ್ಯ ಹಿ ಜ್ಞಾನಂ ನಿತ್ಯಂ ಅಸ್ತಿಸಃ ಅಸರ್ವಜ್ಞಃ ಇತಿ ವಿಪ್ರತಿಷಿದ್ಧಂ॥ ಎಂದು ಭಾಷ್ಯ) (ಬ್ರ: ಸೂ. 1–1–5)

ಮತ್ತು ಭಾಷ್ಯವು ಈಶ್ವರನು ಸರ್ವಜ್ಞನಲ್ಲವೆಂದೂ ಸರ್ವೇಶ್ವರನಲ್ಲವೆಂದೂ ಶಂಕಿಸುವರು ಮೂರ್ಖರೆಂದೂ ಹೇಳಿ ಈಶ್ವರನು ಸರ್ವಜ್ಞನಾದ್ದರಿಂದಲೇ ಜಗತ್ಕಾರಣನೆನಿಸಿರುವನೆಂದೂ ಸ್ಪಷ್ಟವಾಗಿ ಬೋಧಿಸಿದ್ದರೂ ವ್ಯಾಖ್ಯಾನವು ಸ್ವಪಕ್ಷವನ್ನು ಸಾಧಿಸಲು ಬ್ರಹ್ಮದ ಸರ್ವಜ್ಞತ್ವವು ಆಗಂತುಕ ಧರ್ಮವೆಂದೂ ಜ್ಞಾನಬಾಧ್ಯವೆಂದೂ ನಿರೂಪಿಸುತ್ತದೆ,

(ಯಾವಾಸುದೇವೇ (ಅನೀಶ್ವರಾ–ಸರ್ವಜ್ಞಾ ಶಂಕಾ) ಮೂರ್ಖಾಣಾಂ॥ ಎಂದು ಭಾಷ್ಯ. ಗೀ: ಭಾ: ಅ. 4 ಶ್ಲೋ. 4)

ಆದರೆ ವ್ಯಾಖ್ಯಾನವು. ಬ್ರಹ್ಮವು ಸರ್ವಜ್ಞನಲ್ಲವೆಂದೂ, ಕೇವಲ ಜ್ಞಾ ಸ್ವರೂಪವನೆಂದೂ, ಸರ್ವಜ್ಞತ್ವವು ಆಗತುಂಕ ಧರ್ಮವೆಂದೂ. ಬ್ರಹ್ಮವು ನಿರ್ವಿಶೇಷವನದರಿಂದ ಜಗತ್ಕಾರಣನಾಗಲಾರನೆಂದೂ, ಭಾಷ್ಯ ವಿರುದ್ಧವಾಗಿ ಭಾಷ್ಯ

ವನ್ನು ಧಿಕ್ಕರಿಸಿ ನಿರೂಪಿಸುತ್ತದೆ. ಅದರಿಂದ ಈ ವ್ಯಾಖ್ಯಾನವು ತಿರಸ್ಕರಣೀಯವು.

—೩. ಭಾಷ್ಯರೀತ್ಯಾ ಬ್ರಹ್ಮವು ಸರ್ವ ಶಕ್ತನೆಂಬ ನಿರೂಪಣೆ:—

1. "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ" ಎಂಬ ಶ್ರುತಿ(ಶ್ವೇ:ಉ·6–8) ರೀತ್ಯಾ ಭಾಷ್ಯವು ಬಗೆ ಬಗೆಯ ಶಕ್ತಿಗಳ ಸಂಬಂಧವಿರುವದರಿಂದ ಬ್ರಹ್ಮವು ಒಂದರಿಂದಲೇ ವಿಚಿತ್ರವಾದ ಈ ವಿಕಾರ ಪ್ರಪಂಚವು ಸೃಷ್ಟಿಸಲ್ಪಟ್ಟಿರುವದೆಂದೂ; ಮತ್ತು "ಸರ್ವೋಪೇತಾಚ ತದ್ದರ್ಶನಾತ್" ಎಂಬ ಸೂತ್ರ ರೀತ್ಯಾ (ಬ್ರ: ಸೂ: 2–1–30) ಬ್ರಹ್ಮವು ಎಲ್ಲಾ ಶಕ್ತಿಗಳಿಂದ ಕೂಡಿರುವದೆಂದು ಒಪ್ಪಬೇಕೆಂದೂ, ಪರಮಾತ್ಮನಿಗೆ ಜ್ಞಾನ ಪ್ರತಿಬಂಧವಾಗಲಿ ಶಕ್ತಿ ಪ್ರತಿಬಂಧವಾಗಲಿ ಎಲ್ಲಿಯೂ ಸಂಭವಿಸುವದಿಲ್ಲವೆಂದೂ, (ಬ್ರ ಸೂ. 2–1-22) ಅದರಿಂದಲೇ ಬ್ರಹ್ಮವೇ ಜಗತ್ಕಾರಣವೆಂದೂ ಬೋಧಿಸುತ್ತಿಹುದು.

2. "ಸಂಜ್ಞಾಮೂರ್ತಿ ಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್" ಎಂಬ ಸೂತ್ರ ರೀತ್ಯಾ ಭಾಷ್ಯವು ನಾನಾವಿಧ ಗಿರಿನದೀ ಸಮುದ್ರಾದಿಗಳಾಗಿರುವ ಈ ನಾಮರೂಪ ವ್ಯಾಕರಣ ಸಾಮರ್ಥ್ಯವು ಅನೀಶ್ವರನಾದ ಜೀವನಿಗಿಲ್ಲವೆಂದೂ ಅದರಿಂದ ಸರ್ವಜ್ಞ ಸರ್ವಶಕ್ತನಾದ ಬ್ರಹ್ಮವೇ ಈ ನಾಮರೂಪ ವ್ಯಾಕರ್ತನೆಂಬುದು ಸರ್ವೋಪನಿಷತ್ ಸಿದ್ಧಾಂತವೆಂದು ಬೋಧಿಸುತ್ತದೆ (ಬ್ರ: ಸೂ: 2-4–20).

ಆದರೆ ವ್ಯಾಖ್ಯಾನವು ಭಾಷ್ಯವನ್ನು ಧಿಕ್ಕರಿಸಿ ಸ್ವಪಕ್ಷವನ್ನು ಸಾಧಿಸುತ್ತಾ ಜಗತ್ತು ಅವಿದ್ಯಾ ಕಲ್ಪಿತವೆಂದೂ ಜ್ಞಾನಬಾಧ್ಯವೆಂದೂ ನಿರೂಪಿಸುತ್ತದೆ, ಜಗತ್ತು ಅತ್ಯಂತಾ ಭಾವವೆಂಬುದೇ ವ್ಯಾಖ್ಯಾನ ಸಿದ್ಧಾಂತಾಭಿಪ್ರಾಯವು. ಇದರಿಂದ ಸೃಷ್ಟಿಯನ್ನು ಪೇಳುವ ಶ್ರುತಿಗಳೂ, ಸರ್ವಜ್ಞ ಶ್ರುತಿಗಳೂ, ಅವುಗಳನ್ನನುಸರಿಸಿರುವ ಸೂತ್ರಗಳೂ, ತತ್ಸಂಬಂಧ ಭಾಷ್ಯವೂ, ಅಸತ್ಕಾರ್ಯವಾದವನ್ನು ಖಂಡಿಸಿ ಸತ್ಕಾರ್ಯವಾದುವನ್ನು ಸಮರ್ಥಿಸಿರುವ ಭಾಷ್ಯಭಾಗವೂ, ಕಾರ್ಯಕಾರಣಗಳ ನನ್ಯವೆಂಬ ನ್ಯಾಯ ರೀತ್ಯಾ ಸಮಸ್ತ ಜಗತ್ತು ಬ್ರಹ್ಮದ ಕಾರ್ಯವೆಂದೂ ಬ್ರಹ್ಮವೇ ಕಾರಣವೆಂದೂ ಹೇಳಿ ಜಗತ್ತಿಗೂ ಬ್ರಹ್ಮಕ್ಕೂ ಏಕತ್ವವನು

ಸಮರ್ಥಿಸಿರುವ ಪ್ರಥಮಮಾಧ್ಯಾಯದ ಭಾಷ್ಯವೆಲ್ಲವೂ ದ್ವಿತೀಯಧ್ಯಾಯದ ಪ್ರಥಮ ಪಾದದಲ್ಲಿ ಪರವಾದಿಗಳು ಮಾಡಿರುವ ವಿಲಕ್ಷಣತ್ವಾದಿ ಆಕ್ಷೇಪಗಳಿಗೆ ಸಮಾಧಾನವನ್ನು ಹೇಳಿರುವ 37 ಸೂತ್ರಗಳೂ, ತತ್ಸಂಬಂಧ ಭಾಷ್ಯವೂ, ಇವೆಲ್ಲವು ವ್ಯರ್ಥವೆನಿಸಿರುವದು ಕರ್ಮಫಲ ದಾತೃವೇ ಇಲ್ಲದೆ ಕರ್ಮಫಲವೇ ಕರ್ಮಿಗಳಿಗೆ ಇಲ್ಲವೆಂದಾಗಿ ಕರ್ಮಗಳನ್ನು ಮಾಡುವುದು ವ್ಯರ್ಥವೆನಿಸುವುದು. ಶ್ರುತಿ ಪ್ರತಿಜ್ಞೆಗಳನ್ನು ಭಂಗಮಾಡಿರುವುದು ಕಾರ್ಯಕಾರಣಭಾವವನ್ನು ನಿರಾಕರಿಸಿ ಜಗನ್ಮಿಥ್ಯಾವಾದವನ್ನು ಕಲ್ಪಿಸಿರುವದೂ, ಬ್ರಹ್ಮದ ಜಗತ್‌ಕಾರಣವನ್ನು ನಿರಾಕರಿಸಿರುವದೂ ಇವುಗಳಿಂದ ಬ್ರಹ್ಮನನ್ನರಿಯಲು ದ್ವಾರವೇ ಇಲ್ಲದೆ ಈ ವ್ಯಾಖ್ಯಾನವು ಶೂನ್ಯದಲ್ಲಿ ಪರ್ಯವಸಾನವಾಗಿರುವದು.

3. "ರೂಪಂರೂಪಂ ಪ್ರತಿರೂಪೋಬ ಭೂವ, ತದಸ್ಯರೂಪಂ ಪ್ರತಿಚಕ್ಷಣಾಯ ಇಂದ್ರೋ ಮಾಯಾಭಿಃ ಪುರುರೂಪ ಈಯತೇ" ಎಂಬ ಶ್ರುತಿ ರೀತ್ಯಾ (ಬ್ರ ಉ 2-5–19) ಬ್ರಹ್ಮವು ರೂಪರೂಪಕ್ಕೂ ಪ್ರತಿರೂಪನಾದವೆಂದೂ ಇವನ ರೂಪವನ್ನು ತಿಳಿಯಪಡಿಸುವುದಕ್ಕಾಗಿ ಇಂದ್ರನು ಪರಮೇಶ್ವರನು ತನ್ನಮಾಯಾಶಕ್ತಿಯಿಂದ ಬಹುರೂಪವಾಗಿ ತಾನೇ ಕಾಣಿಸುತ್ತಿರುವನೆಂದೂ ಭಾಷ್ಯವು ಬೋಧಿಸುತ್ತಿಹುದು,

4. ಒಬ್ಬನಂತೆ ಒಬ್ಬನಿಲ್ಲದ ಈ ನಾಮರೂಪಗಳನ್ನು ಪರಮಾತ್ಮನು ಮಾಡದೇ ಇದ್ದಿದ್ದರೆ ಆಗ ಪ್ರಜ್ಞಾನಘನ ನಿರುಪಾಧಿಕರೂಪನಾದ ಪರಮಾತ್ಮನೊಬ್ಬನಿರುವನೆಂದು ತಿಳಿಸಿಕೊಟ್ಟಂತಾಗುತ್ತಿರಲಿಲ್ಲ ಎಂದೂ ಭಾಷ್ಯವು ತಿಳಿಸುತ್ತದೆ, (ಯದಿಹಿ ನಾಮರೂಪೇನ ವ್ಯಾಕ್ರಿಯೇತೇ ತದಾಅಸ್ಯ ಆತ್ಮನೋ ನಿರುಪಾಧಿಕಂರೂಪಂ ಪ್ರಜ್ಞಾನಘನಾಖ್ಯಂ ನ ಪ್ರತಿಖ್ಯಾಯೇತ॥ಎಂದು ಭಾಷ್ಯ (ಬ್ರ ಉ, 2_5-19).

ಆದರೆ ವ್ಯಾಖ್ಯಾನವು ಈ ಭಾಷ್ಯ ಭಾಗವನ್ನು ತಿರಸ್ಕರಿಸಿರುವುದೆಂಬುದು ಸ್ಪಷ್ಟವಾಗಿದೆ, ಆದರಿಂದ ವ್ಯಾಖ್ಯಾನವು ತಂದೊಡ್ಡಿರುವ ಜಗನ್ಮಿಥ್ಯಾವಾದವು ಅಸಮಂಜಸವು, ತಿರಸ್ಕರಣೀಯವು

ನಿಜವಾಗಿ ಶೋಧಿಸಿದರೆ ಇದು ಶ್ರುತಿ ವಿರುದ್ಧವು ಭಾಷ್ಯ ವಿರುದ್ಧವು ಅನುಭವವಿರುದ್ಧವು. ಪ್ರಾಜ್ಞರೆಂಬುವರು ಯಾರೂ ತಮ್ಮ ಅನುಭವವನ್ನೆ

ಅಲ್ಲಗಳೆಯುವದು ಯುಕ್ತವೂ ಅಲ್ಲವೆಂದೂ ಭಾಷ್ಯವು ಹಿತೋಪದೇಶವನ್ನು ಮಾಡಿರುವದು. (ನ ಚ ಸ್ವಾನುಭವಾ ವಲಾಪಃ ಪ್ರಾಜ್ಞಮಾನಿಭಿರ್ಯುಕ್ತಃ ಕರ್ತುಂ॥ ಎಂದು (ಬ್ರ ಸೂ 2–2–29) ಮನಸ್ಸಿನಿಂದ ಊಹಿಸುವದಕ್ಕೂ ಆಗದ ಈ ವಿಚಿತ್ರವಿಕಾರ ಪ್ರಪಂಚವು ಮಿಥ್ಯಾ ಭೂತವೇದು ಹೇಳುವುದು ಯುಕ್ತವಲ್ಲ. ಮತ್ತು ಇದು ವ್ಯಾಖ್ಯಾನವೇ ಅಲ್ಲ ಮತ್ತೇನೆಂದರ ಸ್ವತಂತ್ರವಾಗಿ ರಚಿಸಲ್ಪಟ್ಟಿರುವ ಸ್ವಪಕ್ಷ ಸಮರ್ಥನಾ ಗ್ರಂಥವಿದು ಅದರಿಂದ ಈ ವ್ಯಾಖ್ಯಾನ ದಿಂದ ಅದ್ವೈತವು ಸಿದ್ಧಿಸುವುದಿಲ್ಲ ಜಗತ್ತನ್ನೇ ಅಂಗೀಕರಿಸದಿದ್ದರೆ ಅದ್ವೈತ್ವವು ಎಲ್ಲಿಹುದು? ಸರ್ವವೂ ಬ್ರಹ್ಮಸ್ವರೂಪವೆಂಬುದು ಅದ್ವೈತ ಸಿದ್ಧಾಂತವು. ವ್ಯಾಖ್ಯಾನ ಸಿದ್ಧಾಂತ ರೀತ್ಯಾ ಬ್ರಹ್ಮವೇ ಸಿದ್ಧಿಸುವುದಿಲ್ಲ. ಸರ್ವವೂ ಸಿದ್ಧಿಸು ವದಿಲ್ಲ. ಸೃಷ್ಟ್ಯಾದಿಗಳಿಲ್ಲ. ದೇವರಿಲ್ಲ. ಜಗತ್ತೂ ಇಲ್ಲ. ಉಳಿದ ಜೀವನು ಬ್ರಹ್ಮ ಕ್ಕಿಂತ ಬೇರೆಅಲ್ಲ. ಸ್ವದೇಹಪರಿಚ್ಛಿನ್ನ ಪ್ರತ್ಯಗಾತ್ಮನೇ ಬ್ರಹ್ಮವು ಇದು ಅದ್ವೈತ ವೆನಿಸುವುದಿಲ್ಲ. ಜಗತ್ತುಬ್ರಹ್ಮಕ್ಕೆ ಭಿನ್ನವಲ್ಲವೆಂಬುದೇ ಅದ್ವೈತವೆನಿಸುವುದೇ ಹೊರತು ಜಗತ್ತು ಅತ್ಯಂತಾಭಾವವೆಂದು ಹೇಳಿದ ಮಾತ್ರಕ್ಕೆ ಅಷ್ಟು ಅದ್ವೈತ ಸಿದ್ಧಾಂತವಾದೀತೆ ? ದೃಶ್ಯವೆಲ್ಲವನ್ನು ಕಳೆದು ಉಳಿದಿರುವ ಒಂದನ್ನೇ ಬ್ರಹ್ಮ ವೆಂದು ಹೇಳಲಾಗುವದಿಲ್ಲ ಏಕೆಂದರೆ ಅದು ಸರ್ವಜ್ಞನಲ್ಲ ಸರ್ವಶಕ್ತನೂ ಅಲ್ಲ ಜಗತ್ಕಾರಣವೂ ಅಲ್ಲವೆಂಬುದೇ ವ್ಯಾಖ್ಯಾನ ಸಿದ್ಧಾಂತವು. ಈ ಸಿದ್ಧಾಂತದಿಂದ ಸಮ್ಯಕ್‌ಜ್ಞಾನವಾಗದು, ಅವಿದ್ಯೆಯು ತೊಲಗದು ಮುಕ್ತಿಯಾಗದು.

## —೪ ಮಾಯಾ, ಅವಿದ್ಯೆಗಳ ಸ್ವರೂಪ ನಿರೂಪಣೆ:--

1. "ತದನನ್ಯತ್ವ ಮಾರಂಭಣ ಶಬ್ದಾದಿಭ್ಯಃ" ಎಂಬ ಸೂತ್ರ ರೀತ್ಯಾ (ಬ್ರ:ಸೂ: 2–1–14) ಅವಿದ್ಯಾ ಕಲ್ಪಿತ ನಾಮ ರೂಪಗಳ ಸಂಸಾರ ಪ್ರಪಂಚ ಬೀಜಭೂತವಾದ ಸರ್ವಜ್ಞನಾದ ಈಶ್ವರನ ಶಕ್ತಿಯು ಅವನೆಂದಾಗಲಿ, ಬೇರೆ ಎಂದಾಗಲಿ ಹೇಳಲಾಗದ ಈಶ್ವರ ಸ್ವರೂಪವೇಯಾಗಿರುವಂತೆ ಇರುವ ಆ ಶಕ್ತಿ ಯನ್ನು ಈಶ್ವರನ ಮಾಯೆ ಎಂದೂ, ಶಕ್ತಿ ಎಂದೂ, ಪ್ರಕೃತಿ ಎಂದೂ ಶ್ರುತಿ ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವದೆಂದು ಭಾಷ್ಯವು ಬೋಧಿಸುತ್ತದೆ. ಮಾಯೆ ಎಂದರೆ ಪರಮಾತ್ಮನ ಸರ್ವಶಕ್ತಿ ಎಂದರ್ಥ.

2. "ಮಾಯಾಂತು ಪ್ರಕೃತಿಂವಿದ್ಯಾತ್ ಮಾಯಿನಂತು ಮಾಹೇಶ್ವರಂ"

ಎಂಬ ಶ್ರುತಿ ರೀತ್ಯಾ (ಶ್ವೇ ಉ: 4–10) ಭಾಷ್ಯವು ಮಾಯೆಯನ್ನು ಪ್ರಕೃತಿ ಎಂದು ಪರಮೇಶ್ವರನನ್ನು ಮಾಯಿ ಎಂದೂ ತಿಳಿಯಬೇಕೆಂದು ಬೋಧಿಸುತ್ತದೆ.

3. ಬ್ರಹ್ಮವಾದಿಗಳು ಧ್ಯಾನಯೋಗದಿಂದ ಮಾಯೆಯನ್ನು ಸಮಸ್ತ ಜಗತ್ತನ್ನು ವ್ಯವಸ್ಥೆಯನ್ನು ಮಾಡುವ ಪರಮೇಶ್ವರನ ಶಕ್ತಿ ಎಂದು ನಿಶ್ಚಯಿಸಿರುವದರಿಂದ ಭಾಷ್ಯವು ಪ್ರಕೃತಿಯನ್ನು ಮಾಯೆ ಎಂದೂ, ಮಹೇಶ್ವರನನ್ನು ಮಾಯಿ ಎಂದೂ ತಿಳಿಯಬೇಕೆಂದು ಬೋಧಿಸುತ್ತದೆ. (ಬ್ರ:ಸೂ 1-4-9 )

4 ಪ್ರಕೃತಿ ಎಂದರೆ ಸರ್ವಜ್ಞನಾದ ಪರಮೇಶ್ವರನ ಸರ್ವವಿಕಾರ ಕಾರಣವಾದ ಪರಮಾದ್ಭುತ ಅನಿರ್ವಚನೀಯ ಶಕ್ತಿ ಎಂದೂ ಅದೇ ತ್ರಿಗುಣಾತ್ಮಿಕ ಮಾಯೆ ಎಂದೂ ಹೇಳಲ್ಪಟ್ಟಿರುವುದೆಂದು ಭಾಷ್ಯವು ಬೋಧಿಸುತ್ತದೆ. (ಗೀ: ಅ 13: ಶೋ: 19).

5. ಸೃಷ್ಟಿಗೆ ಪೂರ್ವದಲ್ಲಿ ಈ ಜಗತ್ತು ವ್ಯಾಕೃತ ನಾಮರೂಪಗಳನ್ನು ಬಿಟ್ಟು ಬೀಜಶಕ್ತಿ ರೂಪವನ್ನು ಹೊಂದಿ ಅವ್ಯಕ್ತವನಿಸಿ ಬ್ರಹ್ಮಾಭಿನ್ನವಾಗಿರುವದೆಂದು ಅದೇ ಮಾಯೆ ಎನಿಸುವದೆಂದೂ. ಭಾಷ್ಯವು ಬೋಧಿಸುತ್ತದೆ (ಬ್ರ·ಸೂ 1–4–2 ಮತ್ತು 3). [(1) ಸೂಕ್ಷ್ಮಂತುತದರ್ಹತ್ವಾತ್॥ (2) ಕದಧೀನತ್ವಾದರ್ಥವತ್ ].

6 "ನಿತ್ಯೋಪಲಬ್ಧಿ ಅನುಪಮಲಬ್ಧಿ ಪ್ರಸಂಗೋನ್ಯತರ ನಿಯಮೋವಾನ್ಯಥಾ" ಎಂಬ ಸೂತ್ರ ರೀತ್ಯಾ (ಸೂ॥ 2-3-32) ಭಾಷ್ಯವು ಆತ್ಮನು ಅವಿಕ್ರಿಯನಾದ್ದರಿಂದ ಆತ್ಮನಿಗೆ ಶಕ್ತಿ ಪ್ರತಿಬಂಧವು ಸಂಭವಿಸುವುದಿಲ್ಲವೆಂದು ಬೋಧಿಸುತ್ತದೆ ಅದರಿಂದ ಮಾಯೆ ಬಾಧಿಸಲ್ಪಡುವದಲ್ಲ.

7. "ವಿವಕ್ಷಿತ ಗುಣೋಪ ಪತ್ತೇಶ್ಚ" ಎಂಬ ಸೂತ್ರ ರೀತ್ಯಾ (ಸೂ॥1-2-2) ಜಗತ್ ಸೃಷ್ಟಿಸ್ಥಿತಿ ಸಂಹಾರಗಳಲ್ಲಿ ಆತ್ಮನು ಅಪ್ರತಿಬದ್ಧ ಶಕ್ತಿ ಸ್ವರೂಪನೆಂದು ಭಾಷ್ಯವು ಬೋಧಿಸುತ್ತದೆ.

8, ಜಗತ್ತು ಪ್ರಲಯವಾದರೂ ಶಕ್ತಿ ರೂಪದಿಂದ ಅದು ಉಳಿದು

ಕೊಂಡೇ ಪ್ರಲಯವಾಗುವದೆಂದೂ, ಪುನಃ ಅದೇ ಶಕ್ತಿ ಮೂಲಕವಾಗಿಯೇ ಸೃಷ್ಟ್ಯಾದಿಗಳಾಗುವದೆಂದೂ ಭಾಷ್ಯವು ಬೋಧಿಸುತ್ತದೆ (ಬ್ರ:ಸೂ:1–3-30) ಆದರಿಂದ ಮಾಯೆಯು ಜ್ಞಾನಬಾಧ್ಯವಲ್ಲ.

9. "ತದಧೀನತ್ವಾತ್ ಅರ್ಥವತ್" ಎಂಬ ಸೂತ್ರರೀತ್ಯಾ(ಸೂ॥1-4-3) ಮಾಯೆಪರಮೇಶ್ವರನ ಅಧೀನವೆಂದೂ, ಅದನ್ನು ಹಾಗೆ ಅಂಗೀಕರಿಸಬೇಕೆಂದೂ ಅದಿಲ್ಲದೆ ಪರಮೇಶ್ವರನು ಸ್ರಷ್ಟ್ರವೆನಿಸಲಾರನೆಂದೂ ಶಕ್ತಿರಹಿತನು ಸೃಷ್ಟಿಯಲ್ಲಿ ತೊಡಗಲಾರನೆಂದೂ ಭಾಷ್ಯವು ಬೋದಿಸುತ್ತದೆ. ಆದರಿಂದ ಮಾಯೆಯು ನಿತ್ಯವೆನಿಸುತ್ತದೆ

10. ಆತ್ಮನ ವ್ಯತಿರಿಕ್ತತ್ವವನ್ನು, ಶುದ್ಧನೆಂಬುದನ್ನು, ಸ್ವಯಂಜ್ಯೋತಿಸ್ವರೂಪನೆಂಬುದನ್ನು, ಅಲುಪ್ತ ಶಕ್ತಿ ಸ್ವರೂಪನೆಂಬುದನ್ನು ನಿರತಿಶಯಾನಂದ ಸ್ವಭಾವನೆಂಬುದನ್ನು, ಏಕೋದ್ವಿತೀಯನೆಂಬುದನ್ನು, ನಿಶ್ಚಯಿಸಬೇಕೆಂದು ಭಾಷ್ಯವು ಬೋಧಿಸುತ್ತದೆ. (ಬ್ರ:ಉ ಅ 4–ಬ್ರಾ 3).

11. ಆತ್ಮನ ಸ್ವರೂಪ ಭೂತವಾದ ಮಾಯೆಯು ತ್ರಿಗುಣಾತ್ಮಕವಾದ ಪ್ರಕೃತಿ ಎನಿಸಿ ಸರ್ವ ಭೂತಗಳಿಗೆ ಕಾರಣವಾಗಿದೆ ಎಂದು ಭಾಷ್ಯವು ಬೋಧಿಸುತ್ತದೆ. (ಗೀ: 14-3). ಶಕ್ತಿ ಶಕ್ತಿಮತೋಃ ಅನನ್ಯತ್ವಾತ್॥ ಎಂದು ಭಾಷ್ಯ (ಗೀ: 14–27).

12 ಈಶ್ವರನು ನಿತ್ಯನಾದ್ದರಿಂದ ಈಶ್ವರದ ಪ್ರಕೃತಿಗಳು ಕೂಡಾ ನಿತ್ಯವೆಂಬುದೇ ಯುಕ್ತವು. ಈ ಪರಾಪರ ಪ್ರಕೃತಿಗಳಿಂದ ಕೂಡಿರುವದೇ ಈಶ್ವರನ ಈಶ್ವರತ್ವವು. ಈ ಪ್ರಕೃತಿಗಳಿಂದ ಈಶ್ವರನು ಜಗದುತ್ಪತ್ತ್ಯಾದಿಗಳಿಗ ಕಾರಣನು. ಇವೆರಡು ಅನಾದಿಯಾಗಿ ಸಂಸಾರಕ್ಕೆ ಕಾರಣವಾಗಿರುತ್ತವೆ. ಈಶ್ವರನೂ ಅವನ ಪ್ರಕೃತಿಗಳೂ ನಿತ್ಯವಲ್ಲವೆಂದರೆ ಪ್ರಕೃತಿ ಪುರುಷರು ಹುಟ್ಟುವ ಮುಂಚೆ ಆಳುವುದಕ್ಕೆ ಏನೂ ಇಲ್ಲದ್ದರಿಂದ ಈಶ್ವರನು ಈಶ್ವರನಲ್ಲವೆಂದಾಗುವುದು, ಸಂಸಾರವು ನಿರ್ನಿಮಿತ್ತವಾಗಿ ಆಗಿರುವದೆಂದು, ಮೋಕ್ಷವೇ ಇಲ್ಲವೆಂದಾಗುವದೆಂದು, ಶಾಸ್ತ್ರಾನರ್ಥವೆಂದಾಗುವದೆಂದು–ಈ ವಿಧ ದೋಷಗಳು ಪ್ರಾಪ್ತವಾಗುವವು. ಆದರೆ ಈಶರನ್ನ ಪ್ರಕೃತಿಗಳು ನಿತ್ಯವೆಂದಾದರೆ ಯಾವ

ವಿರೋಧವೂ ಇಲ್ಲವೆಂದಾಗಿ ಎಲ್ಲವೂ ಉಪಪನ್ನವಹುದೆಂದು ಭಾಷ್ಯವು ಬೋಧಿಸುವದು (ಗೀ. ಅ 13-19)

13. "ಯುಕ್ತೇಃ ಶಬ್ದಾಂತರಾಚ್ಚ" ಎಂಬ ಸೂತ್ರ ರೀತ್ಯಾ ಕಾರಣ ರೂಪವಾದ ಬ್ರಹ್ಮದ ಶಕ್ತಿಯು ಬ್ರಹ್ಮ ಸ್ವರೂಪವೇ ಎಂದೂ ಸಮಸ್ತ ಜಗತ್ತು ಬ್ರಹ್ಮ ಕಾರ್ಯವಾಗಿರುವದರಿಂದ, ಕಾರ್ಯ ರೂಪವಾದ ಜಗತ್ತೆಲ್ಲವೂ ಶಕ್ತಿ ಸ್ವರೂಪವೇ ಎಂದು ಭಾಷ್ಯವು ಬೋಧಿಸುತ್ತದೆ. (2-1-18). ಆದರಿಂದ ಕಾರ್ಯ ಕಾರಣಗಳನನ್ಯವೆಂದೂ, ಶಕ್ತಿಯು ಕಾರಣ ಸ್ವರೂಪವೇ ಎಂದೂ, ಕಾರ್ಯವು ಶಕ್ತಿ ಸ್ವರೂಪವೇ ಎಂದೂ ಬೋಧಿಸಿರುವದು ಕಾರ್ಯವು ಕಾರಣಕ್ಕಿಂತ ಬೇರೆ ಎಂದು ನಿಶ್ಚಯಿಸಲು ನೂರು ವರ್ಷಗಳಾದರೂ ಸಾಧ್ಯವಾಗದೆಂದು ಭಾಷ್ಯವು ಬೋಧಿಸುತ್ತದೆ

14. "ಅಸಂಭವಸ್ತು ಸತೋಽನುಪಪತ್ತೇಃ" ಎಂಬ ಸೂತ್ರ ರೀತ್ಯಾ (2-3-9) ಮೂಲ ಪ್ರಕೃತಿಯನ್ನಂಗೀಕರಿಸದಿದ್ದರೆ ಅನವಸ್ಥಾ ಪ್ರಸಂಗವಾಗುವದೆಂದು, ಯಾವದು ಮೂಲಪ್ರಕೃತಿಯೋ ಅದು ಬ್ರಹ್ಮವೆಂದೇ ಒಪ್ಪುತ್ತೇವೆಂದು, ಆದರಿಂದ ಯಾವ ವಿರೋಧವಿಲ್ಲವೆಂದು ಸಿದ್ಧಾಂತ ಹಾನಿ ಇಲ್ಲವೆಂದು ಭಾಷ್ಯವು ಬೋಧಿಸುತ್ತದೆ. ಮೂಲ ಪ್ರಕೃತಿಯು ಜ್ಞಾನಬಾಧ್ಯವಲ್ಲ.

15. ನಿತ್ಯ ನಿರತಿಶಯ ಜ್ಞಾನ ಶಕ್ತಿ ಎಂಬ ಉಪಾಧಿಯುಳ್ಳ ಆತ್ಮನೆ ಅಂತರ್ಯಾಮಿಯಾದ ಈಶ್ವರನೆಂದು ಹೇಳಲ್ಪಡುತ್ತಾನೆ. ಅವನೇ ಯಾವ ಉಪಾಧಿಯು ಇಲ್ಲದೆ ಕೇವಲ ಶುದ್ಧನಾಗಿ ತನ್ನ ಸ್ವರೂಪದಲ್ಲಿರುವವನಾಗಿ ಅಕ್ಷರನೆಂದೂ ಪರಮಾತ್ಮನೆಂದೂ ಕರೆಯಿಸಿ ಕೊಳ್ಳುತ್ತಾನೆ. (ಬ: ಉ 3-8-12)

ಈ ರೀತಿಯಾಗಿ ಇನ್ನು ಅನೇಕ ಕಡೆಗಳಲ್ಲಿ ಅತಿ ಸ್ಪಷ್ಟವಾಗಿ ನಿಸ್ಸಂದಿಗ್ಧವಾಗಿ ಮಾಯೆಯು ಪರಮಾತ್ಮನ ಅತ್ಯದ್ಭುತ ಶಕ್ತಿ ಎಂದೂ, ಅದೇ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣವೆಂದೂ. ಅದು ಅಪ್ರತಿಬದ್ಧವೆಂದೂ. ಅದು ಈಶ್ವರಾಧೀನವೆಂದೂ, ಅದು ಬ್ರಹ್ಮಕ್ಕೆ ಅನನ್ಯವೆಂದೂ, ಅದು ಸದಸದ್ವಿಲಕ್ಷಣವಾಗಿ ಅನಿರ್ವಚನೀಯವೆಂದೂ (ಕಾರ್ಯ ರೂಪವಾಗಿ ವ್ಯಕ್ತವಾಗಿ ಕಾರಣ ರೂಪದಿಂದ ಅನನ್ಯವೆನಿಸಿ ಅವ್ಯಾಕೃತವೆಂದೂ ಅವ್ಯಕ್ತವೆಂದೂ.

(ಎಂದರೆ ಬೀಜ ಶಕ್ತಿ ರೂಪವಾಗಿರುವದೆಂದರ್ಥ.) ಅದು ಈಶ್ವರನ ಸ್ವಭಾವವೆನಿಸಿ ತ್ರಿಗುಣಾತ್ಮಕಾ ಮಾಯೆ ಎನಿಸಿ ಪ್ರಕೃತಿ ಎನಿಸುವದೆಂದೂ, (ಸ್ವಭಾವಃ ಈಶ್ವರಸ್ಯ ಪ್ರಕೃತಿಃ ತ್ರಿಗುಣಾತ್ಮಿಕಾ ಮಾಯಾ ॥ ಎಂದು ಭಾಷ್ಯ (14–41 ಗೀ.) ಜಗತ್ತು ಪ್ರಲಯವಾದರೂ ಶಕ್ತ್ಯವಶೇಷವಾಗಿಯೇ ಪ್ರಲಯವಾಗುವದೆಂದೂ, "ಧಾತಾ ಯಥಾ ಪೂರ್ವಮಕಲ್ಪಯತ್" ಎಂಬ ಶ್ರುತಿ ರೀತ್ಯಾ ಪುನಃ ಅದೇ ಶಕ್ತಿ ಮೂಲಕವಾಗಿ ಜಗತ್ ಸೃಷ್ಟ್ಯಾದಿಗಳಾಗುತ್ತಿರುವವೆಂದೂ, ಅದು ಪರಮಾತ್ಮನ ಸ್ವರೂಪ ಭೂತವೆಂದೂ, ಶ್ರುತಿ ಸ್ಮೃತ್ಯಾಧಾರಗಳಿಂದ ಮೇಲೆ ತೋರಿಸಲಾಗಿದೆ

ಆದರೆ ವ್ಯಾಖ್ಯಾನವು ಮಾಯೆಯನ್ನು ಮತ್ತು ಶಕ್ತಿಯನ್ನು

1. ಅಜ್ಞಾನ ಪರ್ಯಾಯ ಪದಗಳೆಂದು ಸ್ವಪಕ್ಷವನ್ನು ಸಾಧಿಸಲು ಸೌಕರ್ಯವಾಗಿರುವಂತೆ ಕಲ್ಪಿಸಿ ವಿವರಿಸಿರುತ್ತದೆ. ಇದು ಯುಕ್ತವೇ ? ಗೀತೆಯು "ಮಮ ಮಾಯಾ" ಎಂದು ಹೇಳಿರುವದನ್ನು 'ನನ್ನ ಅಜ್ಞಾನವು' ಎಂದು ಹೇಳಬಹುದೇ ? ಭಗವಂತನು ಅವಿದ್ಯೆಯೇ ಇಲ್ಲದವನೆಂದು ಹೇಳಿರುವದಲ್ಲ !

2. ಲಲಿತಾ ಸಹಸ್ರನಾಮದಲ್ಲಿ "ಮಹಾ ಮಾಯಾಯೈ ನಮಃ" (215ನೆಯ ನಾಮ) ಹೇಳಿರುವದನ್ನು ಅಜ್ಞಾನವೆಂದು ಅರ್ಥವನ್ನು ಹೇಳಬಹುದೇ ?

3. ವಿಷ್ಣು ಸಹಸ್ರನಾಮದಲ್ಲಿ ಸ್ವಾಮಿಯನ್ನು "ಮಹಾ ಮಾಯಾಯ ನಮಃ" ಎಂದು ಹೇಳಿರುವದಲ್ಲ ! ಅದಕ್ಕೂ ಹಾಗೆ ಅರ್ಥವನ್ನು ಹೇಳಬಹುದೆ ? (170 ನೆಯ ನಾಮ) ಅಜ್ಞಾನವು ಪೂಜಾರ್ಹವೇ ?

## ವ್ಯಾಖ್ಯಾನವು ಅಜ್ಞಾನ ಶಬ್ದದ ಪರ್ಯಾಯ ಪದಗಳೆಂದು ಹೇಳಿ ವಿವರಿಸಿರುವದು.

ಅಜ್ಞಾ, ಅವಿದ್ಯೆನ, ನಾಮರೂಪಗಳು, ಅವ್ಯಾಕೃತ, ಮಾಯಾ, ಪ್ರಕೃತಿ. ಮೂಲಪ್ರಕೃತಿ, ಅವ್ಯಕ್ತ, ಶಕ್ತಿ, ಅಗ್ರಹಣ, ತಮಸ್ಸು, ಕಾರಣ, ಲಯ,

ಮಹಾಸುಷ್ತಿ, ನಿದ್ರೆ, ಅಕ್ಷರ, ಆಕಾಶ ಎಂಬೀ ಹೆಸರುಗಳು ಈ ಅವಿದ್ಯೆಗೆ ಉಂಟೆಂದು ಹೇಳಿದೆ. (ಪಂ–20)

1. ನಿದ್ರೆಯು ಔಷಧ ಪ್ರಯೋಗದಿಂದ ಬರುವಂತೆ ವೈದ್ಯರು ಮಾಡುತ್ತಿರುವಾಗ ಅದಕ್ಕೆ ಅಜ್ಞಾನವೆಂಬ ಅರ್ಥವು ಸಮಂಜಸವೇ ?

2 ಶಕ್ತಿಯು ಅಜ್ಞಾನವೆನಿಸುವದು ಹೇಗೆ ? ವ್ಯಾಖ್ಯಾನವು ಭಾಷ್ಯ ವನ್ನು ಧಿಕ್ಕರಿಸಿ ಮಾಯಾ, ಅವಿದ್ಯೆಗಳು ಪರ್ಯಾಯ ಪದಗಳೆಂದು ಕಲ್ಪಿಸಿ ಸ್ವಪಕ್ಷವನ್ನು ಸಾಧಿಸಲು ಅವುಗಳು ಜ್ಞಾನ ಬಾಧ್ಯವೆಂದು ನಿರೂಪಿಸುತ್ತದೆ. ಇದರಿಂದ ಈ ವ್ಯಾಖ್ಯಾನವು ಭಾಷ್ಯದಲ್ಲಿ ಎಲ್ಲಿಯೂ ಹೇಳದಿರುವ ಜಗನ್ಮಿಥ್ಯಾ ವಾದವನ್ನು ಹೂಡಿ ದ್ವೈತ, ವಿಶಿಷ್ಟಾದ್ವೈತಗಳೆಂಬ ಪರಮತಗಳುದ್ಭವಿಸಲು ಕಾರಣವಾಗಿದೆ. ಮತ್ತು ವ್ಯಾಖ್ಯಾನವು ಪ್ರಪಂಚವು ಕಾಣುವುದಕ್ಕೆ ಅವಿದ್ಯೆಯೇ ಕಾರಣವೆಂದು ಹೇಳಿದೆ. ಇದರಿಂದ ಜಗತ್ತು ಇಲ್ಲವೆಂದಾಗಿ ಜಗನ್ಮಿಥ್ಯಾ ವಾದ ವನ್ನು ತಂದಿರುವದು ಆದರಿಂದ ಮುಮುಕ್ಷುಗಳು ಮಾಯೆ ಅಥವಾ ಪ್ರಕೃತಿ ಎಂದರೆ ಜಗತ್ ಸೃಷ್ಟ್ಯಾದಿಗಳಿಗೆ ಹೇತುವಾದ ಪರಮಾತ್ಮನ ಅಪ್ರತಿಬದ್ಧ ಶಕ್ತಿ ಯೆಂದೂ ಅದು ಜ್ಞಾನಬಾಧ್ಯವಲ್ಲವೆಂದೂ ತಿಳಿಯಬೇಕು. ಅವಿದ್ಯೆ ಎಂದರೆ ಮಾಯೆಯಲ್ಲ' ಮಾಯಾ ಕಾರ್ಯವಾದ ಆತ್ಮಸ್ವರೂಪವನ್ನಾವರಿಸಿರುವ ಅಜ್ಞಾನ ಆವರಣವಂದರಿಯಬೇಕು ಜ್ಞಾನದಿಂದ ನಾಶವಾಗುವದು ಅಜ್ಞಾನ ಒಂದೇ. ಮಾಯೆ ಜ್ಞಾನಬಾಧ್ಯವಲ್ಲ. ಅದು ಹೋಗಬೇಕಾಗಿಯೂ ಇಲ್ಲ. ಹೋಗುವದೂ ಇಲ್ಲ. ಮಾಯೆ ಸಾಧಕವೇ ಹೊರತು ಬಾಧಕವಲ್ಲ. ಮಾಯೆ ಈಶ್ವರಾಧೀನವು.

## — ೫ ವಿದ್ಯಾ ಅವಿದ್ಯೆಗಳ ಸ್ವರೂಪ ನಿರ್ಣಯ —

1. "ದೂರ ಮೇ ತೇ ವಿಪರೀತೇ ವಿಷೂಚೀ ಅವಿದ್ಯಾಯಾ ಚ ವಿದ್ಯೇತಿ ಜ್ಞಾತಾ" ಎಂಬ ಶ್ರುತಿ (ಕಠ ಉಪ 1–2–4) ವಿದ್ಯಾ ವಿದ್ಯೆಗಳೆರಡೂ ಒಂದಕ್ಕೊಂದು ಬಹು ದೂರದಲ್ಲಿರುವವೆಂದೂ, ಮತ್ತು ವಿವೇಕ ರೂಪ ಹಾಗಿಯು ಅವಿವೇಕ ರೂಪವಾಗಿಯು ಬೆಳಕು, ಕತ್ತಲೆಗಳಂತೆ ಪರಸ್ಪರ ವಿರುದ್ಧ ಸ್ವಭಾವವುಳ್ಳವುಗಳಾಗಿರುವವೆಂದೂ, ಬೆಳಕು ಉಂಟಾದರೆ ಕತ್ತಲೆ ಇಲ್ಲವಾಗು

ವಂತೆ ವಿದ್ಯೆಯು ಉಂಟಾದರೆ ಅವಿದ್ಯೆಯು ನಾಶವಾಗುವದೆಂದೂ ಬೋಧಿಸುತ್ತದೆ. ॥

(ಸಮ್ಯಗ್ದರ್ಶನ ವಿರೋಧಾತ್ ಅಪಗಚ್ಛತಿ ಮಿಥ್ಯಾಜ್ಞಾನಂ ॥ ಎಂದು ಭಾಷ್ಯ ಗೀ: 13–26)

## (1) ವಿದ್ಯೆಯ ಸ್ವರೂಪವು

2. ವಸ್ತುವು ಹೇಗಿರುವದೋ ಹಾಗೆ ಅದನ್ನರಿಯುವದು ಅದರ ತತ್ತ್ವಜ್ಞಾನವೆನಿಸುವದು. ಅದು ವಸ್ತುವಿನ ಅಧೀನವಾಗಿರುತ್ತವೆ.

ದೃಷ್ಟಾಂತ.—ಒಂದು ಮೋಟು ಮರವನ್ನು ಅದು ಮೋಟು ಮರವೋ, ಒಬ್ಬ ಪುರುಷನೋ, ಅಥವಾ ಇನ್ನಾವದಾದರೊಂದೋ ಎಂದು ತಿಳಿಯುವದು ತತ್ತ್ವ ಜ್ಞಾನವಾಗಲಾರದು. ಮತ್ತೇನೆಂದರೆ, ಪುರುಷನೆಂದಾಗಲಿ, ಬೇರೊಂದು ಎಂದಾಗಲಿ ತಿಳಿಯುವದು ಮಿಥ್ಯಾ ಜ್ಞಾನವೆನಿಸುವದು ಅದು ಮೋಟು ಮರವೆಂದು ತಿಳಿಯುವದು ತತ್ತ್ವ ಜ್ಞಾನವೆನಿಸುವದು ಏಕೆಂದರೆ ಕರ್ಮವನ್ನು, ಧ್ಯಾನವನ್ನು ಮುಂತಾದುವನ್ನು ಮನುಷ್ಯನು ಮಾಡುವದಕ್ಕೂ. ಬಿಡುವದಕ್ಕೂ. ಅಥವ ಅನ್ಯಥಾ ಮಾಡುವದಕ್ಕೂ ಬರುತ್ತದೆ. ಏಕೆಂದರೆ ಅದು ಪುರುಷಾಧೀನವಾಗಿರುತ್ತದೆ. ಜ್ಞಾನವಾದರೆ ಪ್ರಮಾಣದಿಂದ ಉಂಟಾಗತಕ್ಕದ್ದು. ಪ್ರಮಾಣವು ವಸ್ತುವು ಹೇಗಿರುವದೋ ಹಾಗೆ ತಿಳಿಸುವವು ಎಂದರೆ ವಿಷಯೀಕರಿಸುವದು. ಆದರಿಂವ ಜ್ಞಾನವು ಮಾಡುವದಕ್ಕಾಗಲಿ, ಬಿಡುವದಕ್ಕಾಗಲಿ ಅಥವಾ ಬೇರೊಂದು ವಿಧವಾಗಿ ಮಾಡುವದಕ್ಕಾಗಲಿ ಬರುವದಲ್ಲ. ಏಕೆಂದರೆ ಅದು ವಸ್ತು ತಂತ್ರವಾಗಿಯೇ ಇರುತ್ತದೆಯೋ ಹೊರತು ಚೋದನಾ ತಂತ್ರವೂ ಅಲ್ಲ. ಪುರುಷ ತಂತ್ರವೂ ಅಲ್ಲ. ವಸ್ತುವು ಹೇಗಿವೆಯೋ ಹಾಗೆ ತಿಳಿಸುತ್ತದೆ ಎಂದರೆ ವಸ್ತು ತಂತ್ರ ಮಾತ್ರವಾಗಿರುತ್ತದೆ. ಅದರಿಂದ ಯಾವದು ಹೇಗಿದೆಯೋ ಹಾಗೆಯೇ ತಿಳಿಯುವದರಿಂದ ಅದು ಸಮ್ಯಗ್ದರ್ಶನವೆನಿಸುವವೆಂದು ಹೇಳಿದೆ

## (2) ಅವಿದ್ಯೆಯ ಸ್ವರೂಪವು

1. ಅವಿದ್ಯೆ ಎಂಬ ಪ್ರತ್ಯಯವು ಅಗ್ರಹಣ ರೂಪವಾಗಿರಲಿ (ತಿಳಿಯ

ಲಿಲ್ಲವೆಂಬ ರೂಪವು) ಅನ್ಯಥಾ ಗ್ರಹಣ ರೂಪವಾಗಿರಲಿ, (ವಿಪರೀತವೆಂದಾಗಿ ತಿಳಿಯುವದಾಗಲಿ) ಸಂಶಯ ಗ್ರಹಣ ರೂಪವಾಗಿರಲಿ (ಹೌದೋ ಅಲ್ಲವೋ ಎಂಬ ರೂಪವಾಗಿರಲಿ) ಅದು ಆತ್ಮನಿಗೆ ಮುಸುಕಿನ ರೂಪವಾಗಿರುವದರಿಂದ ತಾಮಸವೇಯಾಗಿರುತ್ತದೆ. ಮತ್ತು ಮುಸುಕಿನ ರೂಪವಾದ ತಾಮಸವಾಗಿರುವ ತಿಮಿರವೇ ಮುಂತಾದ ದೋಷಗಳಿರುವಾಗ ಅಗ್ರಹಣ, ವಿಪರೀತ ಗ್ರಹಣ, ಸಂಶಯ ಗ್ರಹಣವೆಂಬೀ ಮೂರು ವಿಧ ಅಜ್ಞಾನವಿರುವದು ಕಂಡು ಬರುತ್ತದೆ ಎಂದೂ ಭಾಷ್ಯವು ಬೋಧಿಸುತ್ತದೆ. (ಗೀ–ಅ 13–2)

2. ಅವಿದ್ಯೆಯು ಅವ್ಯಕ್ತವು. ಆವರಣ ರೂಪ ಮಾತ್ರವು. ಅದು ಪ್ರವರ್ತಕ ಅಲ್ಲ: ಅದು ವಸ್ತುವನ್ನು ಮುಚ್ಚುವ ಸ್ವಭಾವವುಳ್ಳದ್ದು. ಅದು ಪ್ರವರ್ತಕ ಬೀಜವಾಗಬಹುದು. ಹೇಗೆ ಕುರುಡತನವು ಗುಂಡಿಯಲ್ಲಿ ಬೀಳಲು ಕಾರಣವಾಗಿರುವುದೋ ಹಾಗೆಯೇ ಅವಿದ್ಯೆಯು ವಸ್ತುವನ್ನಾವರಿಸಿ ಏಕರೂಪ ವಾಗಿರುವದರಿಂದ ಅದು ವೈಷಮ್ಯಕ್ಕೆ ಕಾರಣವಲ್ಲವೆಂದೂ, ಆದರೆ "ಉಪ ಪದ್ಯತೇ ಚಾಪ್ಯುಪ ಲಭ್ಯತೇಚ" ಎಂಬ ಸೂತ್ರ ರೀತ್ಯಾ ಭಾಷ್ಯವು ಅದು ರಾಗಾದಿ ಕ್ಲೇಶಗಳ ವಾಸನೆಯಿಂದ ಆಕ್ಷಿಪ್ತವಾದ ಕರ್ಮಾಪೇಕ್ಷೆಯುಳ್ಳದ್ದಾಗಿ ವೈಷಮ್ಯಕ್ಕೆ ಕಾರಣವಾಗಬಹುದು ಎಂದು ಬೋಧಿಸುತ್ತದೆ. (ಅವಿದ್ಯಾ ನೈವ ಪ್ರವರ್ತಿಕಾ । ವಸ್ತು ಸ್ವರೂಪ ಆವರಣಾತ್ಮಿಕಾ ಹಿಸಾ । ಪ್ರವರ್ತಕ ಬೀಜ ತ್ವಂತು ಪ್ರತಿ ಪದ್ಯತೇ । ಅಂಧತ್ವಮಿ ವಗರ್ತಾ ದಿ ಪತನ ಪ್ರವೃತ್ತಿ ಹೇತುಃ ॥ ಎಂದು ಭಾಷ್ಯ. ಬೃ–ಉ–1–4–17 ) , ಬ್ರ–ಸೂ–2–1–36)

3. "ಅನೇನ ಜೀವೇನಾತ್ಮನಾನು ಪ್ರವಿಶ್ಯ ನಾಮ ರೂಪೇ ವ್ಯಾಕರ ವಾಣಿ" ಎಂಬ ಶ್ರುತಿ ರೀತ್ಯಾ (ಛಾಂ–ಉ–6–3–2) ಪರಮಾತ್ಮನೇ ಈ ಜೀವ ರೂಪದಿಂದ ಸಕಲ ಭೂತಗಳಲ್ಲಿ ಅನುಪ್ರವೇಶಿಸಿ ನಾಮ ರೂಪಗಳನ್ನು ಮಾಡುತ್ತೇನೆಂದು (ಉತ್ತಮ ಪುರುಷ ಪ್ರಯೋಗ ಮಾಡಿ ಹೇಳಿರುವದರಿಂದ) ಪರಮಾತ್ಮನೇ ಈ ಜೀವ ರೂಪದಿಂದ ಇರುವನೆಂದು ನಿಶ್ಚಯವಾಗುತ್ತದೆ. ಅಷ್ಟೇ ಅಲ್ಲ. ಅವಿದ್ಯೆಯು ಅನಾದಿ ಎಂದೂ ಸಿದ್ಧವಾಗುತ್ತದೆ.

ಮತ್ತು "ಆತ್ಮನಃ ಮಾಯಾ ಅವಿದ್ಯಾ" ಎಂದು ಬೋಧಿಸುತ್ತಿರುವದ

ರಿಂದ ವಿವಿಧ ಶಕ್ತಿಗಳುಳ್ಳ ಮಾಯೆಯು ಆತ್ಮನನ್ನು ಆವರಣ ಮಾಡಿ ಅವಿದೆ ಎನಿಸುವದು ಮಾಯಾ ಕಾರ್ಯವೇ ಅವಿದ್ಯೆಯು. ಅವಿದ್ಯೆಯು ಆವರಣವೇ, ಏಕೆಂದರೆ ತಮೋ ರೂಪವಾದ ಆವರಣದಿಂದ ಸ್ವರೂಪ ವಿಸ್ಮೃತಿಯಾಗಿ ದೇಹಾದ್ಯಂತಃಕರಣಗಳಲ್ಲಿ ಅದದೇ ತಾನೆಂಬ ಅಧ್ಯಾಸವಾಗಿ ಇಂದ್ರಿಯ ವ್ಯಾಪಾರದಿಂದ ವ್ಯವಹರಿಸುತ್ತಾ ಸಂಸಾರಿಯಾಗಿ ಜೀವನೆನಿಸಿ ಸುಖ ದುಃಖಾನ್ವಿತ ನಾಗಿ ಜನನ ಮರಣ ರೂಪ ಭವಸಾಗರದಲ್ಲಿ ಮುಳುಗಿರುವನು ಅದರಿಂದ ಮಾಯೆಯು ಪರಮಾತ್ಮನನ್ನು ಆವರಿಸದೇ ಇದ್ದಿದ್ದರೆ ಜೀವನಿಗೆ ತನ್ನ ಪ್ರಾರಬ್ಧ ಭೋಗವನ್ನು ಅನುಭವಿಸಿ ತೊಲಗಿಸಿಕೊಳ್ಳಲು ಆಗುತ್ತಿರಲಿಲ್ಲ ಜ್ಞಾನದಿಂದ ಆವರಣ ರೂಪಾ ಜ್ಞಾನವೂ ನಾಶವಾಗುತ್ತದೆಂದು ಗೀತೆಯು ಬೋಧಿಸುತ್ತದೇ (ಗೀ–5–16) ಮಾಯಾ ಅವಿದ್ಯೆಗಳು ಪರ್ಯಾಯ ಪದಗಳೇನೂ ಅಲ್ಲ. ಜ್ಞಾನದಿಂದ ನಾಶವಾಗುವುದು ಅಜ್ಞಾನ ಒಂದೇ. ಮಾಯಾ ಕಾರ್ಯವೆ. ಅವಿದ್ಯೆಯು ಕಾರ್ಯವು ಲಯವಾದರೂ ಕಾರಣವಿರುವದೆಂಬುದೇ ಯುಕ್ತವು. ಅವಿದ್ಯಾ ಸಮ್ಯಕ್ ಜ್ಞಾನದಿಂದ ನಾಶವಾದರೂ ಮಾಯೆಯು ನಾಶವಾಗ ದೆಂಬುದೇ ಯುಕ್ತವು (ಕಾರ್ಯಾಪ್ಯಯೇತು ಕಾರಣಸ್ಯ ಅವಸ್ಥಾನಂ ಯುಕ್ತಂ ॥ ಎಂದು ಭಾಷ್ಯ (ಬ್ರ–ಸೂ–2–3–14)

4 ಅವಿದ್ಯೆಯು ಸರ್ವಾನರ್ಥ ಹೇತುವು. ಸಕಲ ಶಾಸ್ತ್ರಗಳು ಈ ಅವಿದ್ಯೆಯ ನಿವೃತ್ತಿಗಾಗಿಯೇ ಪ್ರವರ್ತಿಸಿರುವವು. ಪರಮಾತ್ಮನ ಜ್ಞಾನಕ್ಕೆ ಈ ಅವಿದ್ಯೆಯೊಂದೆ ಪ್ರತಿಬಂಧವು. ಬ್ರಹ್ಮ ವಿದ್ಯೆಗೆ ಪ್ರಯೋಜನವು ಈ ಅವಿದ್ಯಾ ನಿವೃತ್ತಿಯೇ.

(ಸರ್ವಾನರ್ಥ ಹೇತುಃ ಅವಿದ್ಯಾ ॥ ಎಂದು ಅಧ್ಯಾಸ ಭಾಷ್ಯ.) ; (ಅವಿದ್ಯಾ ಪ್ರತಿಬಂಧ ಮಾತ್ರೋಹಿ ಮೋಕ್ಷೋ ನಾಸ್ಯ ಪ್ರತಿ ಬಂಧಃ ॥ ಎಂದು ಭಾಷ್ಯ. ಮುಂ : ಉ–3–2–8) ; (ಪ್ರಯೋಜನಂಚ ಅಸ್ಯಾ ಬ್ರಹ್ಮ ವಿದ್ಯಾ ಯಾ ಅವಿದ್ಯಾ ನಿವೃತ್ತಿಃ ॥ ಎಂದು ಭಾಷ್ಯ. ಬೃ–ಉ–1–4–10) ; (ಅವಿದ್ಯಾ ಅಪಗಮ ಮಾತ್ರತ್ವಾತ್ ಬ್ರಹ್ಮ ಪ್ರಾಪ್ತಿ ಫಲಸ್ಯ ॥ ಎಂದು ಭಾಷ್ಯ)

5. ಅವಿದ್ಯೆಯು ಮಿಥ್ಯೆಯಾಗಿರುವದರಿಂದ ಜ್ಞಾನ ಸ್ವರೂಪನಾದ

ಆತ್ಮನಲ್ಲಿ ಯಾವ ದೋಷವನ್ನುಂಟು ಮಾಡಲಾರದು. ಅವಿದ್ಯಾ ನಾಶವಾಗುವ ವರೆಗೆ ಶಾಸ್ತ್ರವು ಸಾರ್ಥಕವಾಗಿರುವದೆಂದೂ ಬ್ರಹ್ಮ ಜ್ಞಾನಾನಂತರ ಶಾಸ್ತ್ರವು ಆನರ್ಥಕ್ಯವೆಂದಾಗಲಿ ಎಂದೂ ಭಾಷ್ಯವು ಬೋಧಿಸುತ್ತಿಹುದು. (ಗೀ 13–2)

6. ಆತ್ಮ ಸ್ವರೂಪವನ್ನು ಮುಚ್ಚಿರುವ ಆವರಣವೇ ಅವಿದ್ಯೆಯು. ಇದನ್ನು ಮರೆವೆ ಎಂದೂ ಹೇಳುವದುಂಟು ಸೂರ್ಯನಿಂದುಂಟಾದ ಮೋಡವು ಸೂರ್ಯನನ್ನಾವರಿಸಿರುವಂತೆ ತನ್ನ ಮಾಯಾ ಶಕ್ತಿಯಿಂದ ತನಗೆ ಈ ಆವರಣ ಉಂಟಾಗಿರುವದು. ಈ ಆವರಣದಿಂದ ತನ್ನ ನಿಜ ರೂಪವನ್ನು ಮರೆತು ದೇಹಾತ್ಮ ಬುದ್ಧಿಯುಂಟಾಗಿ ಸಂಸಾರವು ಪ್ರಾಪ್ತವಾಗಿಹುದು. ಅದರಿಂದ ಅವಿದ್ಯೆಯಿಂದ ಬಂಧ ಮೋಕ್ಷಗಳು ಉಂಟಾಗಿರುವವು ಅವಿದ್ಯೆಯು ಅಗ್ರಹಣ, ವಿಪರೀತ ಗ್ರಹಣ. ಸಂಶಯ ಗ್ರಹಣವೆಂಬೀ ಮೂರು ವಿಧವಾಗಿ ಮಾತ್ರ ಇರುವದು. ಬೇರೆ ಇನ್ನಾವ ವಿಧ ಅವಿದ್ಯೆಯು ಇಲ್ಲ

7 ಅವಿದ್ಯೆಯಿಂದ ಉಂಟಾದ ಸಂಸಾರ ಪ್ರಪಂಚವು ಕೇವಲ ಭಾವನಾ ಮಾತ್ರವಾಗಿ ಭ್ರಾಂತಿ ಜನ್ಯವಾದ್ದರಿಂದ ಜ್ಞಾನ ಬಾಧ್ಯವು. ಅದು ಈಶ್ವರನಿಂದ ಸೃಷ್ಟಿಸಲ್ಪಟ್ಟಿರುವ ಪ್ರಪಂಚದಲ್ಲಿರುವ ಕೆಲವು ಶರೀರಗಳನ್ನು ಮಾತ್ರ ತಾನೆಂದೂ ತನದೆಂದೂ ಭಾವಿಸಿಕೊಂಡು ಸಪ್ತ ಧಾತುಮಯ ಸ್ಥೂಲ ಶರೀರಗಳಲ್ಲಿ ತಾಯಿ ತಂದೆಗಳನ್ನು, ಸತಿ ಸುತಾದಿ ಬಂಧುಗಳನ್ನು ಆಶ್ರಮ ಧರ್ಮಗಳನ್ನು, ಜಾತಾ ಶೌಚ ಮೃತಾ ಶೌಚಗಳನ್ನು, ಅಧಿಕಾರಗಳನ್ನು ಜಾತಿಗಳನ್ನು, ಇನ್ನೂ ಅನೇಕ ವಿಧವಾದ ಕಲ್ಪನೆಗಳನ್ನು ಭ್ರಾಂತಿಯಿಂದ ಕಲ್ಪಿಸಿ ವ್ಯವಹರಿಸುವದೇ ಸಂಸಾರ ಪ್ರಪಂಚವೆನಿಸುವನು. ಒಬ್ಬನಿಗಿರುವ ಸಂಸಾರವು ಮತ್ತೊಬ್ಬನಿಗಿಲ್ಲ ಯಾವನಿಗೆ ಜ್ಞಾನ ಉಂಟಾಗುವದೋ ಅವನ ಸಂಸಾರ ಭ್ರಾಂತಿ ನಿವೃತ್ತಿಯಾಗಿ ಅವನ ಅವಿದ್ಯೆಯು ಹೋಗಿ ಅವನು ಮುಕ್ತನಾಗುವನು ಮತ್ತೊಬ್ಬನಲ್ಲ. ಸಂಸಾರ ಪ್ರಪಂಚವು ಭ್ರಾಂತಿಯಿಂದ ಕಲ್ಪಿತವಾದ್ದರಿಂದ ಕೇವಲ ಭಾವನಾ ಮಾತ್ರವಾಗಿರುವದರಿಂದ, ಜ್ಞಾನದಿಂದ ನಾಶವಾಗುವದು. ಅದೇ ಅವನ ಮುಕ್ತಿಗೆ ಪ್ರತಿಬಂಧವು ಅದರ ನಿವೃತ್ತಿಯನ್ನೇ ರಜ್ಜು ಸರ್ಪ, ಸ್ವಪ್ನ ಪ್ರಪಂಚ. ಮರು ಮರೀಚಿಕಾ ದೃಷ್ಟಾಂತಗಳಿಂದ ಜ್ಞಾನಬಾಧ್ಯವೆಂದು ಹೇಳಿರುವದು, ಈಶ್ವರನ ಪ್ರಪಂಚವು ಈಶ್ವರಾಧೀನವು. ಅದು ಜ್ಞಾನ ಬಾಧ್ಯವಲ್ಲ. ಪುರುಷ

ಮಾತ್ರನಾದ ಯಾವನಿಗೂ ಅದನ್ನು ಲಯ ಪಡಿಸಲು ಸಾಧ್ಯವಿಲ್ಲವೆಂದು ಭಾಷ್ಯವು ಬೋಧಿಸುತ್ತದೆ.

ಆದರೆ ವ್ಯಾಖ್ಯಾನವು ಮಾಯಾ ಅವಿದ್ಯೆಗಳು ಪರ್ಯಾಯ ಪದಗಳೆಂದು ನಿರೂಪಿಸಿರುತ್ತದೆ. ಮತ್ತು "ಅಜ್ಞಾನವು ಆವರಿಸಿದ ಆತ್ಮನಲ್ಲಿ ವಿಕ್ಷೇಪ ಶಕ್ತಿಯಿಂದ ಆಕಾಶ ಮೊದಲಾದ ಪ್ರಪಂಚವನ್ನು ಸೃಷ್ಟಿಸುತ್ತ" ದೆಂದು ಹೇಳಿದೆ. ಈ ರೀತಿಯಲ್ಲಿ ಭಾಷ್ಯದಲ್ಲಿ ಎಲ್ಲಿಯೂ ಹೇಳಿರುವದಿಲ್ಲ. ಮತ್ತು ಆ ವಿಕ್ಷೇಪ ಶಕ್ತಿಯು ಲಿಂಗ ಶರೀರದಿಂದ ಹಿಡಿದು ಬ್ರಹ್ಮಾಂಡದವರೆಗಿನ ಜಗತ್ತನ್ನು ಸೃಷ್ಟಿಸುತ್ತದೆ" ಎಂದೂ ನಿರೂಪಿಸಲ್ಪಟ್ಟಿದೆ. ಶ್ರುತಿಗಳಲ್ಲಾಗಲಿ, ಭಾಷ್ಯದಲ್ಲಿಯಾಗಲಿ ಎಲ್ಲಿಯೂ ಅವಿದ್ಯೆಯು ಜಗತ್ತನ್ನು ಸೃಷ್ಟಿಸುವ ಸಾಮರ್ಥ್ಯವುಳ್ಳದ್ದೆಂದಾಗಲಿ, ಅದು ಸೃಷ್ಟಿಸುತ್ತದೆಂದಾಗಲಿ ಹೇಳಿರುವದಿಲ್ಲ. ಇದು ಶ್ರುತಹಾನ್ಯಶ್ರುತಕಲ್ಪನಾ ಎಂಬುದು ಸ್ಪಷ್ಟವು ಇದು ಮುಂದೆ ಜಗನ್ಮಿಥ್ಯಾವಾದವನ್ನು ಸಮರ್ಥಿಸಲು ಮುಂಚಿತವಾಗಿ ಮಾಡಿ ಕೊಂಡಿಟುವ ಸೌಕರ್ಯವು ಈಶ್ವರನು ಅವಿದ್ಯಾ ಕಲ್ಪಿತವೆಂದೂ ಜ್ಞಾನಬಾಧ್ಯವೆಂದೂ ಈ ವ್ಯಾಖ್ಯಾನ ಸಿದ್ಧಾಂತವು. ಹೀಗಿರುವಾಗ ಈ ವ್ಯಾಖ್ಯಾನವನ್ನು ಭಾಷ್ಯ ಸಮ್ಮತವೆನ್ನಬಹುದೇ ?

## — 6. ಜಗತ್ ಸ್ವರೂಪ ನಿರ್ಣಯ —

1. "ಸೂಕ್ಷ್ಮಂತು ತದರ್ಹತ್ವಾತ್" ಎಂಬ ಸೂತ್ರಾನುಸಾರವಾಗಿಯೂ (ಬ್ರ: ಸೂ : 1–4–2) ಭಾಷ್ಯವು "ತದ್ಧೇದಂ ತರ್ಹಿ ಅವ್ಯಾಕೃತ ಮಾಸೀತ್" ಎಂಬ ಶ್ರುತಿ ರೀತ್ಯಾ (ಬೃ : ಉ. 1–4–2) ಈ ಜಗತ್ತು ಸೃಷ್ಟಿಗೆ ಪೂರ್ವದಲ್ಲಿ ವ್ಯಾಕೃತ ನಾಮ ರೂಪಗಳನ್ನು ಬಿಟ್ಟು ಬೀಜ ಶಕ್ತಿ ರೂಪವಾಗಿ ಅವ್ಯಕ್ತವಾಗಿ ಪರಮಾತ್ಮನಲ್ಲಿರುವದೆಂದು ಬೋಧಿಸುತ್ತದೆ.

ಯಾವದು ಯಾವದರಲ್ಲಿರುವದಿಲ್ಲವೋ ಅದು ಅದರಿಂದ ಉತ್ಪತ್ತಿಯಾಗುವದಿಲ್ಲ. ಮರಳಿನಿಂದ ಎಣ್ಣೆಯು ಬರುವದಿಲ್ಲ. ಕ್ಷೀರದಿಂದಲೇ ಮೊಸರು ಮಣ್ಣಿನಿಂದಲೆ ಮಡಕೆಯು ಆಗುತ್ತಿರುವದು ಲೋಕ ವಿದಿತವು. ಇದೇ ಸತ್ಕಾರ್ಯ ವಾದವೆನಿಸುವದು. ಆದರಿಂದ ಅವ್ಯಕ್ತವಾಗಿದ್ದ ಜಗತ್ತು ಸೃಷ್ಟಿ

ಯಾಗಿ ವ್ಯಾಕೃತ ನಾಮ ರೂಪಾತ್ಮಕ ಜಗತ್ತೆನಿಸುವದು. ಜಗತ್ತು ವ್ಯಾಖ್ಯಾನವು ನಿರೂಪಿಸುವಂತೆ ಅತ್ಯಂತ ಅಭಾವವಲ್ಲ.

2. "ಇದಗಿಂ ಸರ್ವಮ ಸೃಜತ । ಯದಿದಂ ಕಿಂಚ" ಎಂಬ ಶ್ರುತಿಯು (ತೈ . ಉ . 2–5) ಇಲ್ಲಿ ಏನೇನಿದೆಯೋ ಅದೆಲ್ಲವನ್ನು ಬ್ರಹ್ಮವು ಸರ್ವಜ್ಞ ಸರ್ವಶಕ್ತನಾದ್ದರಿಂದ ಸೃಷ್ಟಿಸಿರುವನೆಂದು ಬೋಧಿಸುತ್ತದೆ.

3. "ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇ ರಾಪಃ ।.........ಅನ್ನಾತ್ಪುರುಷಃ" ಎಂದು ಶ್ರುತಿ (ತೈ : ಉ ; 2–2 ಈ ಆತ್ಮನಿಂದಲೆ ಆಕಾಶಾದಿಗಳು ಕ್ರಮವಾಗಿ ಸೃಷ್ಟಿ ಉಂಟಾಯಿತೆಂದು ಬೋಧಿಸುತ್ತದೆ. ಈ ರೀತಿಯಾಗಿ ಭಾಷ್ಯವು ಸೃಷ್ಟಿ ಶ್ರುತಿ ಗಳನ್ನು ಅನುಸರಿಸಿ ಬ್ರಹ್ಮವೇ ಸೃಷ್ಟಿಕರ್ತನೆಂದು ಅಂಗೀಕರಿಸಿ ಬೋಧಿಸಿದ್ದರೂ ಭಾಷ್ಯವನ್ನು ಧಿಕ್ಕರಿಸಿ ಸೃಷ್ಟಿ ಶ್ರುತಿಗಳನ್ನು ತಿರಸ್ಕರಿಸಿ ಶ್ರುತಹಾನ್ಯಶ್ರುತ ಕಲ್ಪನೆಗಳನ್ನು ಮಾಡುತ್ತಾ ವ್ಯಾಖ್ಯಾನವು ಜಗತ್ತು ಮಿಥ್ಯಾ ಭೂತವೆಂದೂ ಜ್ಞಾನ ಬಾಧ್ಯವೆಂದೂ ನಿರೂಪಿಸುತ್ತದೆ. ಸಂಸಾರ ಪ್ರಪಂಚವು ಅವನವನ ಭಾವನಾ ಮಾತ್ರವಾಗಿರುವದರಿಂದಲೂ, ಅದು ಅವಿದ್ಯಾ ಕಲ್ಪಿತವಾದ್ದ ರಿಂದಲೂ, ಜ್ಞಾನ ಬಾಧ್ಯವೆಂದು ರಜ್ಜು ಸರ್ಪ ದೃಷ್ಟಾಂತವನ್ನು, ಮರು ಮರೀಚಿಕ ದೃಷ್ಟಾಂತವನ್ನು ಸ್ವಪ್ನ ದೃಷ್ಟಾಂತವನ್ನು ಕೊಟ್ಟು ಭಾಷ್ಯವು ಸಮರ್ಥಿಸಿರುವದೇ ಹೊರತು ಈಶ್ವರನಿಂದ ಸೃಷ್ಟಿಯಾಗಿರುವ ಆಕಾಶಾದಿ ಪ್ರಪಂಚವನ್ನು ಜ್ಞಾನಬಾಧ್ಯವೆಂದು ಹೇಳಿರುವದಿಲ್ಲ ಮತ್ತು ಆ ಆಕಾಶಾದಿ ಪ್ರಪಂಚವನ್ನು ಪುರುಷಮಾತ್ರನೆನಿಸಿದ ಯಾವನೂ ಅದನ್ನು ನಾಶಮಾಡಲಾರ ನೆಂದು ಬೋಧಿಸಿರುತ್ತದೆ.

4. (1) ಬ್ರಹ್ಮವು ಸರ್ವಜ್ಞ ಸರ್ವಶಕ್ತನಾದ್ದರಿಂದ ತಾನು ಸೃಷ್ಟಿ ಸಿರುವ ಜಗತ್ತನ್ನು ನಿಯಮಿಸಿ ತನ್ನ ಅಧೀನದಲ್ಲಿ ಇಟ್ಟುಕೊಂಡಿರುವನು. "ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ" ಎಂಬ ಶ್ರುತಿ (ತೈ : ಉ: 2–7) ಇದಕ್ಕೆ ಪ್ರಮಾಣವು.

(2) "ಅಗ್ನೇರ್ದಹನ ಪ್ರಕಾಶಕತ್ವವತ್ ಸ್ವಾಭಾವಿಕ ಮಸ್ಯ

ಪ್ರಶಾಸ್ತೃತ್ವಂ" ಎಂದೂ ಭಾಷ್ಯವು ಬೆಂಕಿಗೆ ಸುಡುವದು ಬೆಳಗುವದೆಂಬುದು ಸ್ವಾಭಾವಿಕವಾದಂತೆ ತಾನು ಸೃಷ್ಟಿಸಿರುವ ಭೂತಗಳನ್ನು ನಿಯಮಿಸಿ ಕಟ್ಟನಲ್ಲಿಟ್ಟಿರುವದು ಪರಮಾತ್ಮನಿಗೆ ಸ್ವಾಭಾವಿಕವೆಂದು ಬೋಧಿಸುತ್ತಿರುವದು

5. ಪರಮಾತ್ಮನು ಜಗತ್ತು ನಿಯತ ಕಾಲಾನಂತರ ಪ್ರಲಯವಾಗುವದೆಂಬ ನಿಯಮವನ್ನು ವಿಧಿಸಿರುವನು. ಅದರಂತೆ ಜಗತ್ತು ಸೃಷ್ಟಿಕ್ರಮ ವಿಪರೀತವಾಗಿ ಕಾರ್ಯಜಾತವೆಲ್ಲವೂ ಸೂಕ್ಷ್ಮವಾದ ಮುಂದು ಮುಂದಿನ ಕಾರಣವನ್ನು ಸೇರಿ ಪರಮ ಕಾರಣವಾದ ಬ್ರಹ್ಮದಲ್ಲಿ ತುದಿಗೆ ಶಕ್ತಿ ರೂಪವಾಗಿ ಉಳಿದುಕೊಂಡೇ ಪ್ರಲಯವಾಗುವದು ಪುನಃ ಅದೇ ಶಕ್ತಿ ಮೂಲಕವಾಗಿಯೇ ಸೃಷ್ಟ್ಯಾದಿಗಳಾಗುವವೆಂದು ಹೇಳಿದೆ. (ಬ್ರ : ಸೂ: 1–3–30 ಬ್ರ : ಸೂ 2–3–14)

6. ಸೃಷ್ಟಿ ಎಂದರೆ ಕ್ರಿಯೆ ಅಥವಾ ಕಾರ್ಯವು ಕಾರ್ಯಕ್ಕೆ ಕರ್ತೃವಿರಬೇಕೆಂಬ ನಿಯಮವಿದೆ ಎಂದೂ ಭಾಷ್ಯವು ಬೋಧಿಸುತ್ತದೆ. (ಉತ್ಪತ್ತಿಶ್ಚ ನಾಮ ಕ್ರಿಯಾ । ಸಾ ಸಕರ್ತೃಕೈವ ಭವಿತು ಮರ್ಹತಿ ॥ ಎಂದುಭಾಷ್ಯ (ಬ್ರ : ಸೂ : 2–1–18)

7. ಸಕಲ ಭೂತಗಳು ಸೃಷ್ಟಿಗೆ ಪೂರ್ವದಲ್ಲಿ ಪರಮಾತ್ಮನಲ್ಲಿ ಅವ್ಯಕ್ತವಾಗಿರುವವೆಂದೂ, ಸೃಷ್ಟ್ಯನಂತರ ವ್ಯಕ್ತವಾಗಿ ನಾಮ ರೂಪಾತ್ಮಕವಾಗಿ ಕಾಣುತ್ತಿದ್ದು, ನಿಯತ ಕಾಲಾ ನಂತರ ನಾಮ ರೂಪಗಳನ್ನು ಬಿಟ್ಟು ಪ್ರಲಯವಾಗಿ ಬೀಜ ಶಕ್ತಿ ರೂಪವಾಗಿ ಅವ್ಯಕ್ತವೆನಿಸಿ ಪರಮಾತ್ಮನಲ್ಲಿ ತಾದಾತ್ಮ್ಯವನ್ನು ಹೊಂದಿ ಐಕ್ಯವಾಗುವದು ಸತ್ತ್ವವು ಒಂದಾಗುವದು. ಮರಳಿ ಅದೇ ಶಕ್ತಿಯಿಂದ ಸೃಷ್ಟ್ಯಾದಿಗಳನ್ನು ಹೊಂದಿ ಪರಿವರ್ತಿಸುತ್ತಿಹುದು. ಅದರಿಂದ ಸೃಷ್ಟಿಗೆ ಪೂರ್ವದಲ್ಲಿ ಅವ್ಯಕ್ತವಾಗಿ ಜಗತ್ತು ಇತ್ತೆಂದಾಯಿತು. ಸ್ಥಿತಿ ಕಾಲದಲ್ಲಿ ಜಗತ್ತು ನಾಮ ರೂಪಾತ್ಮಕವಾಗಿ ವ್ಯವಹಾರ ಯೋಗ್ಯವಾಗಿ ಇರುತ್ತದೆಂದಾಯಿತು ಪ್ರಲಯವಾಗಿ ಜಗತ್ತು ನಾಮ ರೂಪಗಳನ್ನು ಬಿಟ್ಟು ಶಕ್ತ್ಯವಶೇಷವಾಗಿ ಇರುವದೆಂದಾಯಿತು. ಮರಳಿ ಅದೇ ಶಕ್ತಿ ಮೂಲಕವಾಗಿ ಪರಮಾತ್ಮನಿಂದಲೆ ಜಗತ್ ಸೃಷ್ಟ್ಯಾದಿಗಳು ಇದೇ ರೀತಿಯಾಗಿ ಆಗುತ್ತಿರುವ

ವೆಂದು ಹೇಳಿರುವದರಿಂದಲೂ, ಪರಮಾತ್ಮನೇ ತನ್ನ ಮಾಯೆಯಿಂದ ತನ್ನ ಸ್ವರೂಪಹಾನಿ ಇಲ್ಲದೆ ತಾನೆ ಈ ಪ್ರಪಂಚದ ಆಕಾರವನ್ನು ಹೊಂದಿರುವನೆಂದು ಶ್ರುತಿಗಳು ಬೋಧಿಸುತ್ತಿರುವದರಿಂದಲೂ ಜಗತ್ತು ಯಾವದಾದರೊಂದು ರೂಪದಲ್ಲಿ ಮೂರು ಕಾಲಗಳಲ್ಲಿಯೂ ವ್ಯಭಿಚರಿಸದೆ ಇರುವದೆಂದಾಯಿತು. ಹಿಂದೆ ಮುಂದೆ ಅವ್ಯಕ್ತವಾಗಿ ಮಧ್ಯದಲ್ಲಿ ವ್ಯಕ್ತವಾಗಿರುವದೆಂದರಿಯಬೇಕು. (ಗೀತೆ: ಅ 2–28), (ಆತ್ಮಾನಗ್ ಸ್ವಯಮ ಕುರುತೆ ॥ ಎಂದು ಶ್ರುತಿ ತೈ · ಉ: p 221)

8. "ಯ ಥಾ ಚ ಪ್ರಾಣಾದಿ" ಎಂಬ ಸೂತ್ರಾನು ಸಾರವಾಗಿ (ಸೂ॥ 2–1–20) ಸಮಸ್ತ ಜಗತ್ತು ಬ್ರಹ್ಮದ ಕಾರಣವಾದ್ದರಿಂದ ಕಾರ್ಯ ಕಾರಣ ಗ ಳನನ್ಯವಾದ್ದರಿಂದ "ಯೇನಾ ಶ್ರುತಂ ಶ್ರುತಂ ಭವತ್ಯ ಮತಂ ಮತಂ ಅವಿಜ್ಞಾತಂ ವಿಜ್ಞಾತಂ" ಎಂಬೀ ಶ್ರುತಿ ಪ್ರತಿಜ್ಞೆಯು ಸಿದ್ಧಿಸುವದೆಂದೂ, ಅನ್ಯಥಾ ಶ್ರುತಿ ಪ್ರತಿಜ್ಞೆಯು ಭಂಗವಾಗುವದೆಂದೂ ತೋರಿಸಿ ಎಚ್ಚರಿಸಿ ಭಾಷ್ಯವು ಬೋಧಿಸಿದ್ದರೂ ವ್ಯಾಖ್ಯಾನ ಸಿದ್ಧಾಂತವು ಶ್ರುತಿ ಭಾಷ್ಯಗಳನ್ನು ಧಿಕ್ಕರಿಸಿ, ಕಾರ್ಯಕಾರಣ ಭಾವವನ್ನು ನಿರಾಕರಿಸಿ, ಭಾಷ್ಯ ವಿರುದ್ಧವಾಗಿ ಜಗತ್ತು ಅಭಾವವೆಂದೂ ಅವಿದ್ಯಾ ಕಲ್ಪಿತವೆಂದೂ ಜ್ಞಾನಬಾಧ್ಯವೆಂದೂ ಕಲ್ಪಿಸಿ ನಿರೂಪಿಸಿರುವದು. ಶ್ರುತಹಾನ್ಯಶ್ರುತಕಲ್ಪನಾ ದೋಷಯುಕ್ತ ವಾಗಿರಲು ಈ ವ್ಯಾಖ್ಯಾನವನ್ನು ಶ್ರುತಿ ಭಾಷ್ಯ ಸಮ್ಮತವೆಂದು ತಿಳಿಯುವದು ಹೇಗೆ ?

9. "ಜನ್ಮಾ ದ್ಯಸ್ಯ ಯತಃ" ಎಂಬ ಸೂತ್ರಾನುಸಾರವಾಗಿ ಈ ಜಗತ್ತಿನ ಸೃಷ್ಟ್ಯಾದಿಗಳಿಗೆ ಸರ್ವಜ್ಞ ಸರ್ವ ಶಕ್ತನಾದ ಬ್ರಹ್ಮವೇ ಕಾರಣ ವೆಂದೂ ಬ್ರಹ್ಮವನ್ನರಿಯಲು ಜಗಜ್ಜನ್ಮಾದಿಗಳು ಬ್ರಹ್ಮ ಸ್ವರೂಪ ಲಕ್ಷಣವೆಂದು ಹೇಳಿರುವಾಗ ಜಗತ್ತು ಬ್ರಹ್ಮಗಳಿಗಿರುವ ಕಾರ್ಯ ಕಾರಣ ಭಾವವನ್ನು ಕಡೆ ಗಣಿಸಿ, ಸ್ವರೂಪ ಲಕ್ಷಣವೆಂಬುದನ್ನು ತಿರಸ್ಕರಿಸಿ, ತಾನು ಮುಂದೆ ಸಮರ್ಥಿಸ ಬೇಕೆಂದಿರುವ ಜಗನ್ಮಿಥ್ಯಾ ವಾದವನ್ನು ಹೂಡಿ ಸ್ವಪಕ್ಷವನ್ನು ಸಾಧಿಸಲು ಜಗತ್ತು ತಟಸ್ಥ ಲಕ್ಷಣವೆಂದು ಕಲ್ಪಿಸಿ, ಜಗತ್ತು ಅವಿದ್ಯಾ ಕಲ್ಪಿತವೆಂದೂ ಜ್ಞಾನ ಬಾಧ್ಯವೆಂದೂ ನಿರೂಪಿಸಿರುವದು ಭಾಷ್ಯ ವಿರುದ್ಧವಲ್ಲವೇ ? ತಟಸ್ಥ

ಲಕ್ಷಣವೆಂದು ಕಲ್ಪಿಸಿದ್ದೇಕೆ? ಇದು ಶ್ರುತ ಹಾನ್ಯ ಶ್ರುತ ಕಲ್ಪನೆಯಲ್ಲವೆ? ಇದು ಶ್ರುತಿ ಭಾಷ್ಯ ಸಮ್ಮತವೆಂದು ತಿಳಿಯುವ ಬಗೆ ಹೇಗೆ?

10. "ಪ್ರಕೃತಿಶ್ಚ ಪ್ರತಿಜ್ಞಾ ದೃಷ್ಟಾಂತಾನುಪ ರೋಧಾತ್" ಎಂಬ ಸೂತ್ರ ರೀತ್ಯಾ (ಸೂ॥ I–4–23) ಭಾಷ್ಯವು ಬ್ರಹ್ಮವು ಜಗತ್ತಿಗೆ ನಿಮಿತ್ತ ಕಾರಣವೆಂದೂ ಸರ್ವ ಶಕ್ತಿ ಸ್ವರೂಪವಾದ ತನ್ನ ಪ್ರಕೃತಿಯು ತನ್ನ ಉಪಾದಾನ ಕಾರಣವೆಂದೂ, ಪ್ರಕೃತಿಯು ತನ್ನ ಸ್ವರೂಪವೇಯಾಗಿರುವಧರಿಂಧ ಉಭಯ ಕಾರಣಗಳ ಸ್ವರೂಪನು ಎಂದರೆ ತಾನೇ ಅಭಿನ್ನ ನಿಮಿತ್ತೋಪಾದಾನ ಕಾರಣನೆಂದೂ ಬೋಧಿಸಿರುವದನ್ನು ವ್ಯಾಖ್ಯಾನವು ಕಡೆಗಣಿಸಿ, ಕಾರ್ಯಕಾರಣ ಭಾವವನ್ನು ನಿರಾಕರಿಸಿ, ಜಗತ್ತು ಅವಿದ್ಯಾ ಕಲ್ಪಿತವೆಂದು ಜ್ಞಾನಬಾಧ್ಯವೆಂದು ಕಲ್ಪಿಸಿ ನಿರೂಪಿಸಿರುವದು ಶ್ರುತ ಹಾನ್ಯ ಶ್ರುತ ಕಲ್ಪನೆಯಲ್ಲವೆ? ಅಭಿನ್ನ ನಿಮಿತ್ತೋಪಾದಾನ ಕಾರಣನೆಂದು ಅಂಗೀಕರಿಸಿ ತದ್ವಿರುದ್ಧವಾಗಿ ಜಗತ್ತು ಅವಿದ್ಯಾ ಕಲ್ಪಿತವೆಂದು ಹೇಳುವದು ವಿಪ್ರತಿಷಿದ್ಧವಲ್ಲವೇ?

11. "ಯುಕ್ತೇಃ ಶಬ್ದಾಂತರಾಚ್ಚ" ಎಂಬ ಸೂತ್ರ ರೀತ್ಯಾ (ಸೂ॥ 2–1–18) ಭಾಷ್ಯವು ಜಗತ್ತು ಬ್ರಹ್ಮಕಾರ್ಯವೆಂದೂ, ಸತ್ಕಾರ್ಯವಾದವನ್ನು ಸಮರ್ಥಿಸಿ, ಅಸತ್ಕಾರ್ಯವಾದವನ್ನು ಖಂಡಿಸಿ, ಕಾರ್ಯವು ಶಕ್ತಿಸ್ವರೂಪವೆಂದು, ಶಕ್ತಿಯು ಶಕ್ತನ ಸ್ವರೂಪವೆಂದೂ, ಕಾರ್ಯವು ಕಾರಣಕ್ಕಿಂತ ಬೇರೆ ಅಲ್ಲವೆಂದೂ ಕಾರ್ಯವು ಕಾರಣಕ್ಕಿಂತ ಬೇರೆ ಎಂದು ನೂರು ವರ್ಷಗಳಾದರೂ ನಿಶ್ಚಯಿಸಲಾಗದೆಂದೂ ಬೋಧಿಸುತ್ತದೆ.

ಆದರೆ ವ್ಯಾಖ್ಯಾನವು ಭಾಷ್ಯವನ್ನು ತಿರಸ್ಕರಿಸಿ ಜಗತ್ತು ಅವಿದ್ಯಾಕಲ್ಪಿತವೆಂದೂ ಜ್ಞಾನಬಾಧ್ಯವೆಂದೂ ನಿರೂಪಿಸುತ್ತದೆ. ಒಬ್ಬನ ಅವಿದ್ಯೆ ಮತ್ತೊಬ್ಬನದಲ್ಲ. ಆದರಿಂದ ಯಾರವಿದ್ಯೆಯಿಂದ ಹೇಗೆ ಕಲ್ಪಿಸಲಾಗಿದೆ ಎಂಬುದನ್ನು ವಿವರಿಸಿರುವದಿಲ್ಲ ವಿವರಿಸಲು ಶಕ್ಯವೂ ಇಲ್ಲ. ಅವಿದ್ಯೆ ಎಂಬುದು ಕೇವಲ ಆವರಣ ಮಾತ್ರ. ಪ್ರವರ್ತಕವಲ್ಲ. ಏಕರೂಪವಾಗಿರುವದು. ಇದು ಅದರಿಂದ ವ್ಯಾಖ್ಯಾನಕಾರನ ಕಲ್ಪನಾ ಮಾತ್ರವು. ಹೇಳಿರುವದನ್ನು ಬಿಟ್ಟು ಹೇಳದಿರುವುದನ್ನು ನಿರೂಪಿಸಿರುವದು. ಅದರಿಂದ ಇದು ಇಲ್ಲದ ಸಲ್ಲದ

ಹೊಂದದ ಮಾತು. ಜಗತ್ತು ಆದರಿಂದ ಅವಿದ್ಯಾಕಲ್ಪಿತವಲ್ಲ. ಆದರಿಂದ ಜ್ಞಾನಬಾಧ್ಯವೂ ಅಲ್ಲ. ಹೇಗೆಂದರೆ—ಭಾಷ್ಯವು "ದರ್ಶನಾಚ್ಚ" ಎಂಬ ಸೂತ್ರರೀತ್ಯಾ (ಬ್ರ.ಸೂ. 3-2(21), ಪ್ರಪಂಚವಿಲಯವೆಂದರೆ ಯಾವದೆಂದು ಪ್ರಶ್ನಿಸಿ ಆ ಪ್ರಶ್ನೆಗೆ ಸಮಾಧಾನವಾಗಿ ಈ ಪಾಂಚಭೌತಿಕ ಪ್ರಪಂಚವನ್ನಾಗಲಿ ಈ ದೇಹಾದಿ ಅಧ್ಯಾತ್ಮಿಕ • ಪ್ರಪಂಚವನ್ನಾಗಲಿ ಪುರುಷ ಮಾತ್ರನಾದ ಯಾವನಿಗೂ ಅದನ್ನು ಪ್ರವಿಲಯಮಾಡಲಶಕ್ಯವೆಂದೂ ವಿವರಿಸಿ ಬೋಧಿಸಿರುವದು. ಜ್ಞಾನವು ಅಜ್ಞಾನವನ್ನು ಮಾತ್ರವೇ ತೊಲಗಿಸುವದಲ್ಲದೆ ಯಾವ ವಸ್ತುವನ್ನೂ ನಾಶಪಡಿಸಲಾರದು ಎಂದು ಹೇಳಿದೆ. (ತತ್ಪ್ರವಿಲಯೋಪದೇಶಃ ಅಶಕ್ಯ ವಿಷಯ ಏವ ಸ್ಯಾತ್॥ ಎಂದು ಭಾಷ್ಯ).

12 "ಸತ್ತ್ವಾಚ್ಚಾವರಸ್ಯ" ಎಂಬ ಸೂತ್ರರೀತ್ಯಾ (ಬ್ರ:ಸೂ: 2-1-16) ಕಾರ್ಯವು ಹುಟ್ಟುವ ಮುಂಚೆ ಕಾರಣಕ್ಕೆ ಅನನ್ಯವಾಗಿರುವದರಿಂದ ಕಾರ್ಯವು ಹುಟ್ಟಿದ ಮೇಲೂ ಕಾರಣಕ್ಕೆ ಅನನ್ಯವೇ ಎಂದು ನಿಶ್ಚಯವಾಗುತ್ತದೆ. ಹಾಗೆಯೇ ಕಾರಣವಾದ ಬ್ರಹ್ಮವು ಹೇಗೆ ಮೂರು ಕಾಲಗಳಲ್ಲಿಯೂ ಸತ್ತ್ವವನ್ನು ಬಿಟ್ಟಿರುವದಿಲ್ಲವೋ ಹಾಗೆಯೇ ಕಾರ್ಯವಾದ ಜಗತ್ತೂ ಮೂರು ಕಾಲಗಳಲ್ಲಿಯೂ ಸತ್ತ್ವವನ್ನು ಬಿಟ್ಟಿರುವದಿಲ್ಲವೆಂದು ಆದರೆ ಸತ್ತ್ವವು ಒಂದೇ ಎಂದೂ ಭಾಷ್ಯವು ಬೋಧಿಸುತ್ತಿಹುದು. ಕಾರ್ಯಕಾರಣಗಳನನ್ಯವು.

ಹೀಗೆ ಸ್ಪಷ್ಟವಾಗಿ ಸರ್ವಜ್ಞಸರ್ವಶಕ್ತನಾದ ಬ್ರಹ್ಮವೇ ಜಗತ್ ಕರ್ತನೆಂದೂ, ಜಗತ್ತಿನ ಸೃಷ್ಟ್ಯಾದಿಗಳು ಕೇವಲ ಈಶ್ವರಾಧೀನವೆಂದೂ, ಅನ್ಯಕಾರಣವನ್ನು ನಿಷೇಧಿಸಿ ಶ್ರುತಿಸ್ಮೃತಿ ಭಾಷ್ಯಾದಿಗಳಿಂದ ಸಮರ್ಥಿಸಿ ತೋರಿಸಲಾಯಿತು.

"ತದಾತ್ಮಾನಂ ಸ್ವಯಮಕುರುತ" ಎಂಬ ಶ್ರುತಿ ರೀತ್ಯಾ (ತೈ: ಉ 2-6-1) ಆತ್ಮನು ತಾನೇ ಮಾಯಾವಿಯಂತೆ ತನ್ನ ಸ್ವರೂಪ ಹಾನಿ ಇಲ್ಲದೆ ಈ ಜಗದಾಕಾರವನ್ನು ಹೊಂದಿರುವನೆಂದೂ, "ಸರ್ವಂಖಲ್ವಿದಂ ಬ್ರಹ್ಮ" ಎಂಬ ಶ್ರುತಿ (ಛಾ: ಉ: 2–4–15) ಈ ಅರ್ಥವನ್ನೇ ದೃಢಗೊಳಿಸುತ್ತದೆಂದು ತೋರಿಸಲಾಗಿದೆ

ಆದರೆ ವ್ಯಾಖ್ಯಾನ ಸಿದ್ಧಾಂತವು ಇವೆಲ್ಲವನ್ನು ಧಿಕ್ಕರಿಸಿ ಭಾಷ್ಯ ವಿರುದ್ಧ ವಾಗಿ ಜಗತ್ತು ಅವಿದ್ಯಾಕಲ್ಪಿತವೆಂದೂ ಜ್ಞಾನಭಾಧ್ಯವೆಂದೂ ಕಲ್ಪಿಸಿ ನಿರೂಪಿಸಿರುವದರಿಂದ ಇನ್ನು ಅದು ಅದ್ವೈತಸಿದ್ಧಾಂತವನ್ನು ನಿರೂಪಿಸಿರುವದು ಕೂಡ ಭಾಷ್ಯಕ್ಕೆ ಭಿನ್ನಿಸಿರಬೇಕೆಂಬುದು ಸಹಜವೇಯಾಗಿರುತ್ತದೆ,

## — 7. ಭಾಷ್ಯ ರೀತ್ಯಾ ತತ್ತ್ವ ಮಸಿ ವಾಕ್ಯ ವಿವರ—

1. ಭಾಷ್ಯ ರೀತ್ಯಾ 'ತತ್ತ್ವ ಮಸಿ' ಎಂಬ ವಾಕ್ಯದಲ್ಲಿ 'ತತ , ತ್ವಂ ಅಸಿ' ಎಂಬ ಮೂರು ಪದಗಳಿವೆ. "ತತ್" ಪದವು ಸರ್ವಜ್ಞ ಸರ್ವ ಶಕ್ತನಾದ ಬ್ರಹ್ಮವೇ ಜಗತ್ಕಾರಣವೆಂದು ಆ ಪರಮೇಶ್ವರನನ್ನು ತಿಳಿಸುತ್ತದೆಂದೂ; 'ತ್ವಂ' ಪದವು ಅವಿದ್ಯೋಪಾಧಿಯಿಂದಿರುವ ಕರ್ತ ಭೋಕ್ತನೆನಿಸಿ, ಸುಖ ದುಃಖಾನ್ವಿತ ಜೀವನೆನಿಪ ವಿಜ್ಞಾನಾತ್ಮನನ್ನು ತಿಳಿಸುತ್ತದೆಂದೂ ತಿಳಿಸಿ ಜೀವಬ್ರಹ್ಮೈಕ್ಯವನ್ನು ಬೋಧಿಸುತ್ತದೆ. ಆದರೆ ಜೀವ ಪರಮೇಶ್ವರರಿಗೆ ಪರಸ್ಪರ ವಿರೋಧ ಲಕ್ಷಣ ಗಳಿರುವದರಿಂದ ಐಕ್ಯವು ಘಟಿಸದು ಆದರೆ ಶುತ್ಯರ್ಥವು ಸಾರ್ಥಕವಾಗಲು ಭೇದ ಕಾರಣವಾದ ಜೀವನ ಲಕ್ಷಣಗಳು ಅವಿದ್ಯೋಪಾಧಿ ಕೃತವಾಗಿ ಸಮ್ಯಕ್ ಜ್ಞಾನದಿಂದ ಉಪಾಧಿಯಾದ ಅವಿದ್ಯೆಯು ನಾಶವಾಗಲು ಆ ಜೀವ ಲಕ್ಷಣಗಳೆಲ್ಲ ತೊಲಗಿ ವಿರೋಧಾಂಶವು ಪರಿಹಾರವಾಗಿ ಶ್ರುತಿ ಬೋಧಿಸುವ ಐಕ್ಯಾರ್ಥವು ಸಿದ್ಧಿಸುವದು. ಅದೆಂತೆನೆ.—

ಭಾಷ್ಯವು ಈ ರೀತಿಯಾಗಿ ಬೋಧಿಸುವದು ಹೇಗೆಂದರೆ ? "ಲಿಂಗಾಚ್ಚ" ಎಂಬ ಸೂತ್ರ ರೀತ್ಯಾ (ಬ್ರ : ಸೂ : 4–1–2) 'ತತ್ವ ಮಸಿ' ಎಂಬ ವಾಕ್ಯ ದಲ್ಲಿರುವ 'ತ್ವಂ' ಪದಾರ್ಥಕ್ಕೆ 'ತತ್' ಪದಾರ್ಥವನ್ನು ಹೇಳುತ್ತದೆ. 'ತತ್' ಪದವು ಪ್ರಕೃತವಾದ ಆಲೋಚಿಸಿ ನೋಡಿ ಸೃಷ್ಟಿಸಿದ ಜಗತ್ತಿನ ಜನ್ಮಾದಿಗಳಿಗೆ ಕಾರಣವಾದ ಆ ಸದ್ಬ್ರಹ್ಮವನ್ನು ತಿಳಿಸುತ್ತದೆ ಆ ಬ್ರಹ್ಮವು "ಸತ್ಯ ಜ್ಞಾನಾ ನಂತ ಸ್ವರೂಪವುಳ್ಳದ್ದು" ಎಂದೂ, "ವಿಜ್ಞಾನಾನಂದ ಸ್ವರೂಪ" ವೆಂದೂ, "ಅದೃಷ್ಟವಾಗಿ ದ್ರಷ್ಟೃ" ವೆಂದೂ, "ಅವಿಜ್ಞಾತೃವಾಗಿ ವಿಜ್ಞಾತೃವಾಗಿರುವ" ದೆಂದೂ, "ಅಜವಜರವಮರ ಅಸ್ಥೂಲ, ಅನಣು, ಅಹ್ರಸ್ವ, ಅದೀರ್ಘ

ಮುಂತಾದ ಸ್ವರೂಪವುಳ್ಳದ್ದೆಂದೂ, ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿದೆ. ಆ ಬ್ರಹ್ಮವು ಸಕಲ ಭೂತಗಳನ್ನು ಸೃಷ್ಟಿಸಿ ತಾನೇ ಆ ಸಕಲ ಶರೀರಗಳಲ್ಲಿಯು ಈ ಜೀವ ರೂಪದಿಂವ ಅನುಪ್ರವೇಶ ಮಾಡಿರುವನು. ಜೀವನು ಅವಿದ್ಯೋಪಾಧಿಯಿಂದ ಕರ್ತೃ ಭೋಕ್ತೃವೆನಿಸಿ ಸಂಸಾರಿಯಾಗಿರುವನು. ಅವನು ಶ್ರುತ್ಯಾಚಾರ್ಯೋ'ಪ ದೇಶದಿಂದ ತನ್ನ ನಿಜ ರೂಪವನ್ನರಿತರೆ ಅವಿದ್ಯೆಯು ನಾಶವಾಗಲಾಗಿ ತಾನಾ ಜಗತ್ಕಾರಣನಾದ ಪರಮಾತ್ಮನೇ ಎಂದು ತಿಳಿದು ಮುಕ್ತನಾಗುವನೆಂಬುದು ಭಾಷ್ಯ ಸಿದ್ಧಾಂತವು.

## — ವ್ಯಾಖ್ಯಾನ ರೀತ್ಯಾ "ತತ್ತ್ವಮಸಿ" ಎಂಬ ವಾಕ್ಯ ವಿವರ —

ಆದರೆ ವ್ಯಾಖ್ಯಾನವು ತತ್, ತ್ವಂ ಪದಗಳಲ್ಲಿರುವ ವಿರೋಧಾಂಶ ಪರಿ ಹಾರಕ್ಕಾಗಿ ಬ್ರಹ್ಮವು ಮಾಯೋಪಾಧಿಯಿಂದ ಸರ್ವಜ್ಞ ಸರ್ವ ಶಕ್ತನೆನಿಸಿ ಜಗತ್ಕಾರಣನೆನಿಸಿ ತತ್ಪದ ವಾಚ್ಯನಾದ ಈಶ್ವರನೆನಿಸುವನೆಂದೂ, ಹಾಗೆಯೇ ಬ್ರಹ್ಮವು ಅವಿದ್ಯೋಪಾಧಿಯಿಂದ ತ್ವಂ ಪದ ವಾಚ್ಯಾರ್ಥವೆನಿಸಿ ಜೀವನೆನಿಸಿ ಸಂಸಾರಿ ಎನಿಸುವನೆಂದೂ , ಜೀವನಿಗೆ ಉಪಾಧಿಯಾದ ಅವಿದ್ಯೆಯು ಸಮ್ಯಕ್ ಜ್ಞಾನದಿಂದ ನಾಶವಾಗಲು ಲಕ್ಷ್ಯಾರ್ಥ ಗ್ರಹಣದಿಂದ ಬ್ರಹ್ಮವು ಕೇವಲ ಚೈತನ್ಯ ನೆನಿಸಿ ಅವಶಿಷ್ಟನಾಗಿ ಸಿದ್ಧಿಸುವನೆಂದೂ, ಮಾಯಾ ಅವಿದ್ಯೆಗಳು ಪರ್ಯಾಯ ಪದಗಳೆಂದು ಕಲ್ಪಿಸಿರುವದರಿಂದ ಅವಿದ್ಯೆಯು ಸಮ್ಯಕ್ ಜ್ಞಾನದಿಂದ ನಾಶ ವಾಗುವಂತೆ ಮಾಯೆಯು ಈಶ್ವರನಿಗೆ ಉಪಾಧಿಯಾದ್ದರಿಂದ ಅದು ನಾಶವಾಗಿ ಈಶ್ವರತ್ವವೂ, ಅವನ ಸರ್ವಜ್ಞತ್ವವೂ, ಸರ್ವ ಶಕ್ತಿತ್ವವೂ, ಜಗತ್ಕಾರಣತ್ವವೂ, ಅವನಿಂದಾದ ಜಗತ್ತೂ ಎಲ್ಲವು ನಾಶವಾಗಿ ಲಕ್ಷ್ಯಾರ್ಥ ಗ್ರಹಣದಿಂದ ಬ್ರಹ್ಮವು ಕೇವಲ ಚೈತನ್ಯವೆನಿಸಿ ಅವಶಿಷ್ಟವಾಗಿ ಸಿದ್ಧಿಸುವದೆಂದೂ ಉಭಯ ಚೈತನ್ಯಗಳು ನಿರುಪಾಧಿಕವಾಗಿ ಒಂದೇ ಚೈತನ್ಯವೆನಿಸಿ ಅದ್ವೈತ ಸಿದ್ಧಿಯಾಗುವದೆಂದು ನಿರೂಪಿಸುತ್ತದೆ. ಆದರೆ ಈ ವ್ಯಾಖ್ಯಾನವು ಶ್ರುತಿ ಭಾಷ್ಯ ವಿರುದ್ಧವು. ಹೇಗೆಂದರೆ ?

## —"ತತ್ತ್ವಮಸಿ"ಯ ವ್ಯಾಖ್ಯಾನದಲ್ಲಿರುವ ದೋಷಗಳು—

1 ಈ ವ್ಯಾಖ್ಯಾನದಿಂದ ಬ್ರಹ್ಮವೂ ಸಿದ್ಧಿಸುವದಿಲ್ಲ. ಈಶ್ವರನೂ ಸಿದ್ಧಿಸುವದಿಲ್ಲ ಭಾಷ್ಯದಲ್ಲಿ ಎಲ್ಲಿಯೂ ತತ್ಪದವಾಚ್ಯನೆಂದು ಈಶ್ವರನನ್ನು ಹೇಳಿರುವುದಿಲ್ಲ.

2 ಮತ್ತು ಭಾಷ್ಯವು "ಈಶ್ವರನು ಲೋಕದಲ್ಲಿ ಅಪ್ರಸಿದ್ಧನಾಗಿರುವನೆಂದೂ, ಈಶ್ವರನನ್ನು ಶ್ರುತಿಯ ತಾತ್ಪರ್ಯದಿಂದಲೇ ತಿಳಿಯಬೇಕೆಂದೂ ತಿಳಿಸಿ ಈಶ್ವರನನ್ನು ವಾಚ್ಯಾರ್ಥವಾಗಿ ಕಲ್ಪಿಸಿ ಆಕಸ್ಮಿಕವಾಗಿ ಹೇಳವದು ಯುಕ್ತವಲ್ಲವೆಂದೂ ಬೋಧಿಸುತ್ತದೆ. (ಈಶ್ವರಸ್ತು ಲೋಕತಃ ಅಪ್ರಸಿದ್ಧತ್ವಾತ್ ಶ್ರುತ್ಯಾತಾತ್ಪರ್ಯೇಣ ವಿವಕ್ಷ್ಯತೇ ಇತಿ ನತಸ್ಯ ಆಕಸ್ಮಿಕಂ ವಚನಂಯುಕ್ತಂ॥ ಎಂದು ಭಾಷ್ಯ. (ಬ್ರ: ಸೂ: 1–3–7) ಆದರಿಂದ ತತ್ಪದವಾಚ್ಯಾರ್ಥವು ಬರಿಯ ಕಲ್ಪನಾ ಮಾತ್ರವೆ ಈ ಕಲ್ಪನೆಯು ನಿರರ್ಥಕವು ಇನ್ನೂ ದಯವಿಟ್ಟು ನೋಡಿ.

3 (a) ಮಾಯಾ ಅವಿದ್ಯೆಗಳು ಪರ್ಯಾಯ ಪದಗಳಲ್ಲ ಮೋಕ್ಷಕ್ಕೆ ಪ್ರತಿಬಂಧಕವಾಗಿರುವದು ಅವಿದ್ಯೆ ಒಂದೇ. ಅನ್ಯ ಪ್ರತಿಬಂಧವಾವುದೂ ಇಲ್ಲ, (ಅವಿದ್ಯಾ ಪ್ರತಿಬಂಧ ಮಾತ್ರೋಹಿಮೋಕ್ಷೋನಾನ್ಯ ಪ್ರತಿಬಂಧಃ॥ ಎಂದು ಭಾಷ್ಯ. ಮುಂ: ಉ: 3–9.) ಆದರಿಂದ ಜ್ಞಾನವು ಕಳೆಯುವದು ಅವಿದ್ಯೆ ಒಂದನ್ನೇ ಅನ್ಯಪ್ರತಿಬಂಧವು ಯಾವದೂ ಇಲ್ಲ, ಮಾಯೆ ಪ್ರತಿಬಂಧವಲ್ಲ ಜ್ಞಾನದಿಂದ ಅದು ನಿವೃತ್ತಿಯಾಗುವದಲ್ಲ. ಅದು ನಿವೃತ್ತಿಯಾಗಬೇಕಾಗಿಲ್ಲ. ಅದು ನಿವೃಯಾಗತಕ್ಕದ್ದೂ ಅಲ್ಲ. ಶಾಸ್ತ್ರವೆಲ್ಲವು ಅವಿದ್ಯೆಯಿಂದ ಕಲ್ಪಿತವಾಗಿರುವ ಭೇದವನ್ನು ಮಾತ್ರ ನಿವೃತ್ತಿಮಾಡುವದರಲ್ಲಿ ತಾತ್ಪರ್ಯವುಳ್ಳದ್ದು." ಎಂದು ಭಾಷ್ಯ. (ಅವಿದ್ಯಾಕಲ್ಪಿತ ಭೇದ ನಿವೃತ್ತಿಪರತ್ವಾತ್ ಶಾಸ್ತ್ರಸ್ಯ" ಎಂದು ಭಾಷ್ಯ. ಬ್ರ: ಸೂ: 1–1–4) ಆದರಿಂದ ಮಾಯೆಯು ಜ್ಞಾನಬಾಧ್ಯವಲ್ಲ.

(b) ಮಾಯೆಯು ಜಗಜ್ಜನ್ಮಾದಿಗಳಿಗೆ ಹೇತುವಾದ ಪರಮಾತ್ಮನ ಸ್ವರೂಪಭೂತವಾದ ಪರಮಾದ್ಭುತ ಅಪ್ರತಿಬದ್ಧ ಶಕ್ತಿಯು. ಅದು ನಿತ್ಯವು.

ನಿರತಿಶಯವಾಗಿ ಪರಮಾತ್ಮನಿಗೆ ಜಗತ್ ಸೃಷ್ಟ್ಯಾದಿಗಳಲ್ಲಿ ಉಪಾಧಿಯಾಗಿರುವದೆಂದು ಹೇಳಿದೆ. (ನಿತ್ಯನಿರತಿಶಯ ಜ್ಞಾನ ಶಕ್ತ್ಯುಪಾಧಿರಾತ್ಮಾ ಅಂತರ್ಯಾಮೀ ಈಶ್ವರ ಉಚ್ಯತೇ॥ ಎಂದು ಭಾಷ್ಯ. ಬ್ರ: ಸೂ: 3–8–12). ಅದರಿಂದ ಜ್ಞಾನಬಾಧ್ಯವಲ್ಲ ಅದು ಜಗತ್ತು ಪ್ರಲಯವಾದರೂ ಶಕ್ತ್ಯವಶೇಷವಾಗಿ ಬ್ರಹ್ಮಾಭಿನ್ನವಾಗಿರ ತ್ತದೆ, ಶಕ್ತಿ ಪರಮಾತ್ಮನಿಗೆ ಅನನ್ಯವು. ಆ ಶಕ್ತಿಗೆ ಎಲ್ಲಿಯೂ ಯಾವವಿಧ ಪ್ರತಿಬಂಧವೂ ಇಲ್ಲ (ನಚತಸ್ಯ ಶಕ್ತಿ ಪ್ರತಿಬಂಧಃ ಕ್ವಚಿದಪಿ ಅಸ್ತಿ॥ ಎಂದು ಭಾಷ್ಯ). (ಬ್ರ: ಸೂ 2–1–22).

4 ವ್ಯಾಖ್ಯಾನವು ಮಾಯಾ, ಅವಿದ್ಯೆಗಳು ಪರ್ಯಾಯ ಪದಗಳೆಂದು ಅಂಗೀಕರಿಸಿರುವದರಿಂದ ಮಾಯಾ ಎಂದರೂ ಅವಿದ್ಯೆ ಎಂದರೂ ಒಂದೇ. ಅದರಿಂದ ತತ್‌ಪದವಾಚ್ಯನಾದ ಈಶ್ವರನು ಅವನ ಸರ್ವಜ್ಞತ್ವಾದಿಗಳು ಅವಿದ್ಯಾ ಕಲ್ಪಿತವೆಂದಾಯಿತು. ಸಮ್ಯಗ್ದರ್ಶನದಿಂದ ಅವಿದ್ಯೆಯು ನಾಶವಾಗಲು ಮಾಯೆಯು ನಾಶವಾಗುವದೆಂದು ಆಗಿ ಈಶ್ವರನು ಈಶ್ವರನಲ್ಲವೆಂದಾಗಿ ಸೃಷ್ಟಿಯನ್ನು ಸರ್ವಜ್ಞತ್ವಾದಿಗಳನ್ನು ಬೋಧಿಸುವ ಶ್ರುತಿಗಳೆಲ್ಲವು ವ್ಯರ್ಥವೆಂದಾಗಿ ಶಾಸ್ತ್ರಾನರ್ಥಕ್ಯವೆಂದಾಗಿ ಬಂಧ ಮೋಕ್ಷಗಳೇ ಇಲ್ಲವೆಂದಾಗಿ ಎಲ್ಲವೂ ಶೂನ್ಯದಲ್ಲಿ ಪರ್ಯವಸಾನವಾಗುವದು ವ್ಯಾಖ್ಯಾನವು ಭಾಷ್ಯಾನುಸಾರವಲ್ಲ.

5 ಈಶ್ವರನು ಯಾವಾಗಲೂ ಅವಿದ್ಯೆಯೇ ಇಲ್ಲದವನೆಂದೂ, ಈಶ್ವರನಿಗೆ ಜ್ಞಾನವುಂಟಾಗಲು ಶರೀರಾದಿಗಳ ಅಪೇಕ್ಷೆಯೇ ಇಲ್ಲವೆಂದೂ, ಅವನ ಜ್ಞಾನಕ್ಕೆ ಯಾವ ಮುಸುಕು ಇಲ್ಲವೆಂದೂ ಭಾಷ್ಯವು ಬೋಧಿಸುತ್ತದೆ. ( (1) ನಿತ್ಯನಿವೃತ್ತಾವಿದ್ಯತ್ವಾತ್ ಈಶ್ವರಸ್ಯ॥ ಎಂದು ಭಾಷ್ಯ. ಬ್ರ: ಸೂ: 3–2–9) ; (2) ನ ಜ್ಞಾನ ಪ್ರತಿಬಂಧ ಕಾರಣ ರಹಿತಸ್ಯ॥ ಎಂದೂ ; (3) ಈಶ್ವರಸ್ಯ ಶರೀರಾದ್ಯನಪೇಕ್ಷತಾಂ ಅನಾವರಣ ಜ್ಞಾನತಾಂ ಚ ದರ್ಶಯತಃ॥ ಎಂದು ಭಾಷ್ಯ. ಬ್ರ: ಸೂ: 1–1–5).

ಆದರೆ ವ್ಯಾಖ್ಯಾನವು ಈಶ್ವರನೇ ಅವಿದ್ಯಾಕಲ್ಪಿತವೆಂದೂ, ಜ್ಞಾನ

ಬಾಧ್ಯನೆಂದೂ ಹೇಳಿದರೆ ಈಶ್ವರನೇ ನಾಶವಾಗುವನೆಂದಾಗಿ ಈಶ್ವರನೇ ಇಲ್ಲವೆಂದಾಗುವದಿಲ್ಲವೇ ?.

6. ವ್ಯಾಖ್ಯಾನವು ಮಾಯಾ, ಅವಿದ್ಯೆಗಳು ಪರ್ಯಾಯ ಪದಗಳೆಂದಂಗೀಕರಿಸಿರುವದಿಂದಲೂ, ಬ್ರಹ್ಮವು ಒಂದೇಯೊದ್ದರಿಂದಲೂ, ಬ್ರಹ್ಮವು ಮಾಯೋಪಾಧಿಯಿಂದ ಸರ್ವ ಶಕ್ತನಾಗಿ ಜಗತ್ಕಾರಣನೆನಿಸಿ ಈಶ್ವರನಾಗುವುದೇನು ? ಅವಿದ್ಯೋಪಾಧಿಯಿಂದ ಕಿಂಚಿಜ್ಞನೆನಿಸಿ ಸಂಸಾರಿ ಎನಿಸಿ ಬದ್ಧನಾದ ಜೀವನೆನಿಸುವದೇನು ?

7 ಮಾಯೋಪಾಧಿಯಿಂದ ಬ್ರಹ್ಮವು ಸರ್ವಜ್ಞನಾಗಿ ಸರ್ವ ಶಕ್ತನಾಗಿ ಜಗತ್ಕಾರಣನಾಗಿ ಈಶ್ವರನಾಗುವುದು ಹೇಗೆ ? ಬ್ರಹ್ಮದಲ್ಲಿ ಸರ್ವಜ್ಞತ್ವವು ಸರ್ವ ಶಕ್ತಿತ್ವವು ಇಲ್ಲ. ಅದರಿಂದ ಬ್ರಹ್ಮನಿಂದ ಈಶ್ವರನಿಗೆ ಸರ್ವಜ್ಞತ್ವಾದಿಗಳು ಸಂಭವಿಸುವ ಹಾಗಿಲ್ಲ. ಮಾಯಾ ಅವಿದ್ಯೆಗಳು ಪರ್ಯಾಯ ಪದಗಳು ಮಾಯೆಯಲ್ಲಿಯೂ ಅವಿದ್ಯೆಯಲ್ಲಿಯೂ ಸರ್ವಜ್ಞತ್ವಾದಿಗಳಿಲ್ಲ. ಅದರಿಂದ ಮಾಯೆಯಿಂದಾಗಲಿ ಅವಿದ್ಯೆಯಿಂದಾಗಲಿ ಸರ್ವಜ್ಞತ್ವಾದಿಗಳು ಸಂಭವಿಸುವ ಹಾಗಿಲ್ಲ. ಜೀವನು ಕಿಂಚಿಜ್ಞನು ಅವನಿಂದಲೂ ಸರ್ವಜ್ಞತ್ವವು ಸಂಭವಿಸುವ ಹಾಗಿಲ್ಲ. ಹೀಗೆ ಇರುವಾಗ ಈಶ್ವರನಿಗೆ ಸರ್ವಜ್ಞತ್ವಾದಿಗಳು ಎಲ್ಲಿಂದ ಬರುತ್ತವೆ ? ಇಂತೀ ವಾಕ್ಯಾರ್ಥವಾದರೆ ಬ್ರಹ್ಮ ಜ್ಞಾನವು ಆಗುವದೆಂತು ? ಈಶ್ವರನೇ ಸಿದ್ಧಿಸುವದಿಲ್ಲವಲ್ಲ. !

ಈ ರೀತಿಯಾಗಿ ಶ್ರೀ ಶಂಕರಗುರುಸ್ವಾಮಿಗಳವರ ಪ್ರಸ್ಥಾನ ತ್ರಯ ಭಾಷ್ಯಕ್ಕೂ ವ್ಯಾಖ್ಯಾನಕ್ಕೂ ಬ್ರಹ್ಮ ಸ್ವರೂಪ, ಮಾಯಾ, ಅವಿದ್ಯೆಗಳ ಸ್ವರೂಪ, ಜಗತ್ ಸ್ವರೂಪ, ಜೀವ ಸ್ವರೂಪ, ತತ್ತ್ವಮಸಿ ವಾಕ್ಯಾರ್ಥ ಮುಂತಾದ ವಿಷಯಗಳಲ್ಲಿ ಪರಸ್ಪರ ಅತ್ಯಂತ ಭಿನ್ನವಾಗಿ ತತ್ತ್ವವು ನಿರೂಪಿಸಲ್ಪಟ್ಟಿದೆ. ಆದರಿಂದ ವ್ಯಾಖ್ಯಾನವು ಭಾಷ್ಯ ವಿರುದ್ಧವೆಂಬುದು, ಭಾಷ್ಯವನ್ನನುಸರಿಸಿಲ್ಲವೆಂಬುದು ಸ್ಪಷ್ಟವಾಗಿರುವದು. ಆದರಿಂದ ಪ್ರಾಮುಖ್ಯ ವಿಷಯಗಳ ತತ್ತ್ವವನ್ನು ನಿರೂಪಿಸಿರುವದರಲ್ಲಿಯೇ ಪೂರ್ವ ಪಶ್ಚಿಮಗಳಂತೆ ಪರಸ್ಪರ ಭಿನ್ನಾಭಿಪ್ರಾಯಗಳಿರುವದರಿಂದ ಅವುಗಳನ್ನಾಶ್ರಯಿಸಿರುವ ಅದ್ವೈತ ಸಿದ್ಧಾಂತ

ದಲ್ಲಿಯೂ ವ್ಯತ್ಯಾಸವಿದ್ದೇ ಇರುವದೆಂದಾಯಿತು ಆದರೆ ಭಾಷ್ಯ ಸಮ್ಯಕ್ ಜ್ಞಾನದಿಂದಲೇ ಮಿಥ್ಯಾ ಜ್ಞಾನ ನಿವೃತ್ತಿಯಾಗಿ ಮುಕ್ತಿ ಲಭಿಸುವದೇ ವಿನಾ ವ್ಯಾಖ್ಯಾನ ಜ್ಞಾನದಿಂದ ಮುಕ್ತಿಯಾಗದು ಎಂದಾಯಿತು. ಆತ್ಮನಿಗೆ ಬುದ್ಧಿಯ ಉಪಾಧಿಯ ಸಂಬಂಧವು ಮಿಥ್ಯಾ ಜ್ಞಾನ ಪುರಸ್ಸರವಾಗಿರುತ್ತದೆ. ಈ ಉಪಾಧಿಯ ಸಂಬಂಧವು ಬ್ರಹ್ಮ ಜ್ಞಾನದಿಂದಲೇ ನಾಶವಾಗತಕ್ಕದ್ದು. ಅದರಿಂದ ಭಾಷ್ಯ ಜ್ಞಾನದಿಂದಲೇ ಮುಕ್ತಿ ಲಾಭವು. (ಬ್ರ ಸೂ. 2–3–30) ವ್ಯಾಖ್ಯಾನ ಸಿದ್ಧಾಂತವು ಭಾಷ್ಯವನ್ನನುಸರಿಸದೆ ಹೇಗೆ ಶೂನ್ಯ ವಾದದಲ್ಲಿ ಪರ್ಯವಸಾನವಾಗಿದೆ ಎಂದು ಮೇಲೆಯೇ ವಿವರಿಸಲಾಗಿದೆ.

## — 8. ಅದ್ವೈತವೇ ಶ್ರುತ್ಯಂತ ಸಿದ್ಧಾಂತವು —

"ಬ್ರಹ್ಮ ವಿದಾಪ್ನೋತಿ ಪರಂ" ಎಂಬ ಶ್ರುತಿ (ತೈ : ಉ 2–1) ಮುಕ್ತಿಗೆ ಹೇತುವಾಗಿರುವದರಿಂದ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ ಪರಮಾತ್ಮನನ್ನು ಅರಿಯಬೇಕೆಂದು ಹೇಳಿದೆ. ಎಲ್ಲಾ ಶ್ರುತಿಗಳಿಗೂ ಅದ್ವೈತ ದಲ್ಲಿಯೇ ತಾತ್ಪರ್ಯವಿದೆ ಎಂದು ಭಾಷ್ಯಕಾರರು ತಮ್ಮ ಪ್ರಸ್ಥಾನ ತ್ರಯದಲ್ಲಿ ವೇದಾಂತ ಸೂತ್ರಗಳಿಗೆ ಅರ್ಥವನ್ನು ನಿರ್ಣಯಿಸಿ ಭಾಷ್ಯವನ್ನು ಬರೆದು ಅನು ಗ್ರಹಿಸಿರುವರು ಶ್ರುತಿ ವಿರುದ್ಧವಾದ ಮತಗಳನ್ನು ಅಲ್ಲಲ್ಲಿ ಪ್ರಾಸಂಗಿಕವಾಗಿ ಪ್ರಸ್ತಾಪಿಸಿ ಅವುಗಳನ್ನು ಖಂಡಿಸಿ ಶ್ರುತಿ ಸಮ್ಮತವಾಗಿ ತತ್ತ್ವವನ್ನು ಪ್ರತಿಪಾದಿ ಸಿರುವರು. ಅದರಲ್ಲಿ ಸಾಂಖ್ಯ ಮತವು ವೇದಾಂತಕ್ಕೆ ಬಹಳ ಹತ್ತಿರವಿರುವಂತೆ ಇದ್ದರೂ ಅದು ಶ್ರುತಿ ವಿರುದ್ಧವೆಂದು ಹೇಳಿ ಸಾಂಖ್ಯ ಮತವನ್ನು ಖಂಡಿಸಿ ಶ್ರುತಿ ಸಮ್ಮತ ಸಿದ್ಧಾಂತವನ್ನು ಭಾಷ್ಯವು ಬೋಧಿಸುತ್ತದೆ. ಸಾಂಖ್ಯ ಮತವು ಭಾಷ್ಯಕ್ಕೆ ಭಿನ್ನವಾಗಿಯೇ ಬ್ರಹ್ಮ ಸ್ವರೂಪವನ್ನು, ಜಗತ್ ಸ್ವರೂಪವನ್ನು ಜೀವನ ಸ್ವರೂಪವನ್ನು ವಿವರಿಸಿರುವದು. ಸಾಂಖ್ಯ ಮತದ ಪೂರ್ವ ಪಕ್ಷಗಳನ್ನು ಶಂಕರ ಸ್ವಾಮಿಗಳು ತಮ್ಮ ಭಾಷ್ಯದಲ್ಲಿ ದೋಷಗಳನ್ನು ತೋರಿಸಿ ಖಂಡಿ ಸಿದ್ದರೂ ಆ ಪೂರ್ವ ಪಕ್ಷಗಳನ್ನೇ ಶಂಕರ ಸಿದ್ಧಾಂತವೆಂದು ಹೇಳಿ ತಮ್ಮ ವ್ಯಾಖ್ಯಾನದಲ್ಲಿ ತೋರಿಸಿರುವರು. ಬ್ರಹ್ಮ ಸರ್ವಜ್ಞತ್ವದ ಮತ್ತು ಜಗತ್ಕಾರಣತ್ವದ ವಿಷಯಗಳನ್ನು ವಿವರಿಸಿರುವುದರಲ್ಲಿ ಅವರ ಪೂರ್ವ ಪಕ್ಷಗ ಳನ್ನೂ ಅವುಗಳಿಗೆ ಸಮಾಧಾನವನ್ನು ಕಾಣಬಹುದು. ಅದರಿಂದ ವ್ಯಾಖ್ಯಾನವು

ಜಗನ್ಮಿಥ್ಯಾವಾದವನ್ನು ಹೂಡಿ ಪರಮತೀಯರು "ಅದ್ವೈತಿಗಳು ಪ್ರಚ್ಛನ್ನ ಬೌದ್ಧರು" ಎಂದು ದೂಷಿಸಲು ಅವಕಾಶವನ್ನು ಉಂಟುಮಾಡಿ, ಜಗತ್ತಿಲ್ಲ ವೆಂದೂ ಬ್ರಹ್ಮದ ಜಗತ್ಕಾರಣತ್ವವನ್ನು ನಿರಾಕರಿಸಿ, ಮಾಯಾ ಅವಿದ್ಯೆಗಳು ಪರ್ಯಾಯ ಪದಗಳೆಂದು ಕಲ್ಪಿಸಿ ಸ್ವದೇಹ ಪರಿಚ್ಛಿನ್ನ ಪ್ರತ್ಯಗಾತ್ಮನನ್ನೇ ಪರಮಾತ್ಮನೆಂದು ಸ್ವಪಕ್ಷವನ್ನು ಸಾಧಿಸುತ್ತಾ ಭಾಷ್ಯ ಸಿದ್ಧಾಂತವನ್ನು ಛಿದ್ರಿಸಿ ತಾನು ಹೇಳಿರುವದೇ ಭಾಷ್ಯ ಸಿದ್ಧಾಂತವೆಂದು ಸಾಧಿಸಿ ಸಮರ್ಥಿಸಿರುವದು ಸರ್ವಜ್ಞತ್ವವು ಜಗತ್ಕಾರಣತ್ವವು ಇಲ್ಲದ್ದು ಬ್ರಹ್ಮವು ಹೇಗೆ ? ಆದ್ದರಿಂದ ಬ್ರಹ್ಮವು ಇಲ್ಲ. ಜಗನ್ಮಿಥ್ಯಾ ಜಗತ್ತಿಲ್ಲ. ಇನ್ನು ಉಳಿದದ್ದು ಸ್ವದೇಹ ಪರಿಚ್ಛಿನ್ನ ಪ್ರತ್ಯಗಾತ್ಮನೇ. ಅವನೇ ಬ್ರಹ್ಮ. ಇದು ಭಾಷ್ಯ ಸಮ್ಮತವೇ ? ಇದು ಶಂಕರ ಸಿದ್ಧಾಂತವೇ ? ಅದರಿಂದ ವ್ಯಾಖ್ಯಾನಕಾರನು ಕಲ್ಪಿಸಿರುವ "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾ ಪರ:" ಎಂಬುದು ಭಾಷ್ಯ ಸಮ್ಮತ ಅದ್ವೈತ ಸಿದ್ಧಾಂತವಲ್ಲ ಭಾಷ್ಯದಲ್ಲಿ ಎಲ್ಲಿಯೂ ಹೇಳಿರುವದಿಲ್ಲ. ಸಾಂಖ್ಯ ಸಿದ್ಧಾಂತದ ಕಲ್ಪನಾ ಮಾತ್ರವೇ.

## — 9. ಅದ್ವೈತ ಸಿದ್ಧಾಂತ ಪದ್ಧತಿ —

ಅದ್ವೈತವೇ ಶ್ರುತ್ಯಂತ ಸಿದ್ಧಾಂತವೆಂದ ಮೇಲೆ ಅದ್ವೈತ ಶಬ್ದಾರ್ಥ ವನ್ನು ನಿರ್ಣಯಿಸಲು ಮುಖ್ಯವಾಗಿ ನಾವು ವಿಚಾರ ಮಾಡಬೇಕಾಗಿರುವ ವಿಷಯಗಳು ಮೂರು ಬ್ರಹ್ಮ, ಜಗತ್ತು, ಜೀವ—ಈ ಮೂರರ ಸ್ವರೂಪ ವನ್ನು ನಿಶ್ಚಯಿಸ ಬೇಕು. ಈ ಮೂರು ಪರಸ್ಪರ ಭಿನ್ನವಾಗಿ ಕಾಣುತ್ತಿದ್ದರೂ ಇವೆಲ್ಲವೂ ಆ ಬ್ರಹ್ಮದ ಒಂದರ ಸ್ವರೂಪವೇ ಎಂಬುದು ಶ್ರುತಿ ಮತವು. ಅವು ಭಿನ್ನಭಿನ್ನವಾಗಿರುವವೆಂದು ಹೇಳುವದೇ ಭಿನ್ನ ಜ್ಞಾನವು. ಅದೇ ರಾಗಾದಿ ಗಳಿಗೆ ಮೂಲವು. ಅದೇ ಸಂಸಾರಕ್ಕೂ, ಜನನ ಮರಣಗಳಿಗೂ ಬೀಜವು ಈ ಭಿನ್ನ ಜ್ಞಾನವು ಸಮ್ಯಕ್ ಜ್ಞಾನಕ್ಕೆ ವಿರೋಧಿಯಾದ ಅಜ್ಞಾನವೆನಿಸುವದು. ಭಿನ್ನ ಜ್ಞಾನವು ಅಜ್ಞಾನವು ಜ್ಞಾನ ಬಾಧ್ಯವು

ಬ್ರಹ್ಮಕ್ಕೆ ಭಿನ್ನವಾಗಿ ನಾಮರೂಪಗಳಾಗಿ ಕಾಣುತ್ತಿರುವ ಈ ಜಗತ್ತು ಪರಮಾತ್ಮನಿಂದ ಸೃಷ್ಟಿಸಲ್ಪಟ್ಟಿರುವದು. ಅವನ ಕಾರ್ಯವಿದು. ಕಾರ್ಯವು

ಅವನಿಂದಾದುದು. ಅವನನ್ನಾಶ್ರಯಿಸಿ ಕೊಂಡಿರುವದು ಪರಮಾತ್ಮನು ಸರ್ವಜ್ಞನು, ಸರ್ವ ಶಕ್ತನು, ಮಹಾಮಾಯಾ ಸ್ವರೂಪನು ಮಾಯಾವಿಯಂತೆ ಅವನೇ ಈ ಜಗದಾಕಾರನಾಗಿರುವನು. ಹಾಗಿಲ್ಲದಿದ್ದರೆ ಸಿಂಹ ಶಾರ್ದೂಲ ಗಳನ್ನು. ಪಂಚ ಮಹಾ ಭೂತಗಳನ್ನು, ಸೂರ್ಯ ಚಂದ್ರ ನಕ್ಷತ್ರಾದಿಗಳನ್ನು, ಮಹಾ ಸಮುದ್ರವನ್ನು. ವಿಂಧ್ಯಾದಿ ಪರ್ವತಗಳನ್ನು, ಗಂಗಾದಿ ಮಹಾನದಿ ಗಳನ್ನು, ನರ ಪಶು ಪಕ್ಷ್ಯಾದಿಗಳನ್ನು, ತಿಮಿಂಗಿಲ ಮುಂತಾದ ಘೋರ ಜಲ ಚರ ಗಳನ್ನು, ಅಣು ಮಹದ್ರೂಪಗಳನ್ನು, ಹೊಂದಿ ಈ ಜಗದಾಕಾರವನ್ನು ತಾಳು ವದು ಪರಮಾತ್ಮನಲ್ಲದೆ ಇನ್ನಾರಿಗೆ ಸಾಧ್ಯ ? ಸೃಷ್ಟಿಯಾದ ಈ ಜಗತ್ತು ಸೃಷ್ಟಿಗೆ ಪೂರ್ವದಲ್ಲಿ ಬೀಜಶಕ್ತಿ ರೂಪವಾಗಿ ಅವ್ಯಾಕೃತರೂಪವಾಗಿ ಅವ್ಯಕ ವಾಗಿ ಬ್ರಹ್ಮಾಭಿನ್ನವಾಗಿ "ಶಕ್ತಿ ಶಕ್ತಿಮತೋಃ ಅನನ್ಯತ್ವಾತ್" ಎಂಬ ನ್ಯಾಯದಂತೆ ಹೇಗೆ ಇತ್ತೆಂದು ಶ್ರುತಿ ಸೂತ್ರಗಳು ಹೇಳುತ್ತವೆಯೋ. ಹಾಗೆಯೇ ಸ್ಥಿತಿ ಕಾಲ ದಲ್ಲಿಯೂ ಈ ಜಗತ್ತು ಆಕಾಶದಲ್ಲಿ ವಾಯುವಿರುವಂತೆ ಬ್ರಹ್ಮನಲ್ಲಿರುತ್ತ ದೆಂದೂ, ನಿಯತ ಕಾಲಾನಂತರ ಈ ಜಗತ್ತು ನಾಮ ರೂಪಗಳನ್ನು ತ್ಯಜಿಸಿ ಮುಂದುಮುಂದಿನ ಕಾರಣದಲ್ಲಿ ಈ ಕಾರ್ಯವಾದ ಜಗತ್ತು ಲಯಿಸುತ್ತಾ ಪ್ರಲಯವಾಗುವದು. ಪುನಃ ಜಗತ್ಸೃಷ್ಟ್ಯಾದಿಗಳು ಅದೇ ಶಕ್ತಿ ಮೂಲಕ ಇದೇ ಪ್ರಕಾರವಾಗಿ ಸಂಭವಿಸುವವು ಆದರಿಂದ ಕಾರ್ಯ ಕಾರಣಗಳನನ್ಯವು. ಕಾರ್ಯವು ಕಾರಣಕ್ಕಿಂತ ಬೇರೆ ಎಂದು ನೂರು ವರ್ಷಗಳಾದರೂ ನಿಶ್ಚಯಿಸಲು ಶಕ್ಯವಿಲ್ಲ. ಪರಮಾತ್ಮನೇ ಜಗದಾಕಾರವನ್ನು ಹೊಂದಿರುವನೆಂದು ಹೇಳಿದ ಮೇಲೆ ಜಗತ್ತು ಬ್ರಹ್ಮ ಸ್ವರೂಪವೆನ್ನುವದಕ್ಕೆ ಸಂಶಯಹೆಲ್ಲಿ ಬಂತು ? ಆದರಿಂದ ಜಗತ್ತು ಬ್ರಹ್ಮ ಸ್ವರೂಪವೇ. ಶಕ್ತಿಯು ಕಾರ್ಯ ಸ್ವರೂಪವು. ಶಕ್ತಿಯು ಶಕ್ತನ ಸ್ವರೂಪವು. ಇದು ಸರ್ವಲೋಕ ವಿದಿತವು. ಸರ್ವಂ ಖಲ್ವಿದಂ ಬ್ರಹ್ಮ' (ಛಾಂ: ಉ · 3–14–1) ಎಂಬ ಶ್ರುತಿ ಜಗತ್ತಿಗೂ ಬ್ರಹ್ಮಕ್ಕೂ ಕಾರ್ಯ ಕಾರಣಭಾವವನ್ನು ಅಂಗೀಕರಿಸಿದ ಹೊರತು ಅವುಗಳಿಗೆ ಏಕತ್ವವು ಸಿದ್ಧಿಸುವದಿಲ್ಲ. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳು ಕೇವಲ ಈಶ್ವರಾ ಧೀನವಾಗಿರುವದರಿಂದಲೂ, ಜಗತ್ತು ಬ್ರಹ್ಮ ಸ್ವರೂಪವೇ ಯಾಗಿರುವದ ರಿಂದಲೂ, ಕಾರ್ಯ ಕಾರಣಗಳನನ್ಯವಾಗಿರುವದರಿಂದಲೂ ಜಗತ್ತು ಬ್ರಹ್ಮಕ್ಕೆ ಭಿನ್ನವಲ್ಲ. ಸತ್ತ್ವವು ಒಂದೇ.

ಮೂರನೆಯದು ಜೀವನ ಸ್ವರೂಪವು ಬ್ರಹ್ಮವು ಸಕಲ ಭೂತಗಳನ್ನು ಸೃಷ್ಟಿಸಿ ಸಕಲ ಶರೀರಗಳಲ್ಲಿಯು ತಾನೇ ಈ ಜೀವರೂಪದಿಂದ ಅನುಪ್ರವೇಶ ಮಾಡಿರುವನೆಂದು ಶ್ರುತಿ ಬೋಧಿಸುತ್ತದೆ. (ಛಾಂ ಉ: 6-3-2) ಪರಮಾತ್ಮನು ಅವಿದ್ಯೋಪಾಧಿಯಿಂದ ಸಕಲೇಂದ್ರಿಯಗಳ ದ್ವಾರಾ ವ್ಯವಹರಿಸುತ್ತಾ ಕರ್ತ ಭೋಕ್ತನೆನಿಸಿ ಸುಖ-ದುಃಖಗಳನ್ನನುಭವಿಸುತ್ತಾ ಜೀವನೆನಿಸಿರುವನೇ ಹೊರತು ಸರ್ವಜ್ಞ ಸರ್ವ-ಶಕ್ತನಾದ ಸರ್ವೇಶ್ವರನಿಗಿಂತ ಬೇರೆಯಾಗಿ ಜೀವನೆನಿಸಿ ಚೈತನ್ಯಾತ್ಮನೊಬ್ಬನಿರುವನೆಂದು ವೇದಾಂತಾರ್ಥವನ್ನು ಪರೀಕ್ಷಿಸಿದರೆ ಎಲ್ಲಿಯೂ ಕಂಡುಬರುವದಿಲ್ಲವೆಂದು ಭಾಷ್ಯವು ಬೋಧಿಸುತ್ತದೆ.

(ಪರಮಾರ್ಥ-ತಸ್ತು) ನ ಜೀವೋ ನಾಮ ಬುದ್ಧ್ಯುಪಾದಿ ಸಂಬಂಧ ಪರಿಕಲ್ಪಿತ ಸ್ವರೂಪ ವ್ಯತಿ ರೇಕೇಣ ಅಸ್ತಿ । ನ ಹಿ ನಿತ್ಯ ಮುಕ್ತ ಸ್ವರೂಪಾತ್ ಸರ್ವಜ್ಞಾತ್ ಈಶ್ವರಾತ್ ಅನ್ಯಃ ಚೇತನೋ ಧಾತುಃ ದ್ವಿತೀಯಃ ವೇದಾಂತಾರ್ಥ ನಿರೂಪಣಾಯಾಂ ಉಪಲಭ್ಯತೇ ॥ ಎಂದೂ ಭಾಷ್ಯ. (ಬ್ರ: ಸೂ : 2-3-30)

ಮತ್ತು ಜೀವನು ಅತ್ಯಂತ ಭಿನ್ನನೂ ಅಲ್ಲ ಈ ಜೀವನು ಪರಮಾತ್ಮನಿಗೆ ಜಲ ಸೂರ್ಯಕವೇ ಮುಂತಾದ್ದರಂತೆ ಪರಮಾತ್ಮನ ಆಭಾಸವೇ ಎಂದು ತಿಳಿಯಬೇಕು. ಅವನೇ ಸಾಕ್ಷಾತ್ ಸೂರ್ಯನಲ್ಲ, ಆದರೂ ಬೇರೆ ವಸ್ತುವೂ ಅಲ್ಲವೆಂದು ತಿಳಿಯಬೇಕು. ಆಭಾಸವು ಅವಿದ್ಯಾ ಕೃತವಾಗಿರುವದರಿಂದ ಅದನ್ನಾಶ್ರಯಿಸಿರುವ ಸಂಸಾರವು ಅವಿದ್ಯಾ ಕೃತವಾಗಿರಬಹುದು. ಅದರಿಂದ ಅದನ್ನು ತಿರಸ್ಕರಿಸಿ ಪರಮಾರ್ಥವಾದ ಬ್ರಹ್ಮಾತ್ಮ ಭಾವವನ್ನು ಶ್ರುತಿ ಉಪದೇಶಿಸಿರುವದು ಹೊಂದುತ್ತದೆ. (ಬ ಸೂ. 2-3-50) ಈ ರೀತಿಯಲ್ಲಿ ಜೀವನು ಸಮ್ಯಕ್ ಜ್ಞಾನದಿಂದ ತನ್ನ ನಿಜ ರೂಪವನ್ನರಿತು ಅವಿದ್ಯೆಯನ್ನು ತೊಲಗಿಸಿಕೊಂಡರೆ ತಾನಾ ಪರಮಾತ್ಮನೇ ಎಂದರಿತು ಜೀವನ್ಮುಕ್ತನಾಗುವನು. ಅದರಿಂದ ಜೀವನೂ ಬ್ರಹ್ಮ ಸ್ವರೂಪವೇ ಎಂದು ನಿಶ್ಚಯವಾಗುತ್ತದೆ. ಒಂದೇ ಮುಂದೆರಡಾಗಿ, ಮೂರಾಗಿ, ನಾಲಕ್ಕಾಗುವದು ಒಂದೇ. ಅದು ಒಂದೇ ಸತ್ಯವಾದ ಪರಬ್ರಹ್ಮವು ಬ್ರಹ್ಮಾಂಡಾಕಾರವಾಗಿ ವ್ಯವಹರಿಸುತ್ತಿರುವದು ಅವನ್

ಲೀಲೆಯೆಂದು ಹೇಳಿದೆ (ಪರಮೇಶ್ವರಸ್ಯ ಲೀಲೈವ ಕೇವಲಾ ಇಯಂ ॥ ಎಂದು ಭಾಷ್ಯ ಬ್ರ ಸೂ. 2–1–33) ಈಶ್ವರನಿಗೆ ನ್ಯಾಯದಿಂದಾಗಲಿ ಶ್ರುತಿಯಿಂದಾಗಲಿ ಸರಿಯಾಗಿ ನೋಡಿದರೆ ಯಾವ ಪ್ರಯೋಜನವು ಹೊಂದುವದಿಲ್ಲ ಸ್ವಭಾವವನ್ನು ಆಕ್ಷೇಪಿಸುವದು ಯುಕ್ತವಲ್ಲ.

ಇದು ಶ್ರುತ್ಯುಕ್ತ ಅದ್ವೈತ ಸಿದ್ಧಾಂತ ಪದ್ಧತಿ ಎನಿಸುವದು. ಅದರಿಂದ ದ್ವೈತವು ಶ್ರುತಿ ವಿರುದ್ಧವು ಸಮೀಚೀನವಲ್ಲ. ಹೇಗೆಂದರೆ, ಶ್ರುತಿಯೇ ದ್ವೈತವನ್ನು ನಿಂದಿಸುವದು. ಅದೆಂತೆಂದರೆ —

1. "ದ್ವಿತೀಯಾದ್ವೈ ಭಯಂ ಭವತಿ" ಎಂಬ ಶ್ರುತಿ (ಬೃ. ಉ: 1–4–2) ಎರಡನೆಯದಿಂದಲೇ ಭಯ ಉಂಟಾಗುವದು ಎಂದು ಹೇಳುತ್ತದೆ,

2 "ನೇದಂ ಯದಿದ ಮುಪಾಸತೇ" ಎಂಬ ಶ್ರುತಿ (ಕೇನ ಉ: 1–5) ಇದಮೆನಿಸಿ ಕಾಣುವದು ಬ್ರಹ್ಮವಲ್ಲದ್ದರಿಂದ ಅದು ಉಪಾಸನೆಗೆ ಯೋಗ್ಯವಲ್ಲವೆಂದು ಬೋಧಿಸುತ್ತದೆ

3 "ಮನಸೈವಾನು ದ್ರಷ್ಟವ್ಯಂ । ನೇಹ ನಾನಾಸ್ತಿಕಿಂಚನ ಮೃತ್ಯೋಃ ಸಮೃತ್ಯು ಮಾಪ್ನೋತಿ ಯ ಇಹ ನಾನೇವ ಪಶ್ಯತಿ" ಎಂಬ ಶ್ರುತಿ ಬೃ· ಉ. 4–4–19) ಮನಸ್ಸಿನಿಂದಲೇ ಬ್ರಹ್ಮವನ್ನರಿಯಬೇಕು. ಇಲ್ಲಿ ನಾನಾತ್ವವಿಲ್ಲ, ಯಾವನಿಲ್ಲಿ ನಾನಾತ್ವವನ್ನು ಕಾಣುವನೋ ಅವನು ಹುಟ್ಟು ಸಾವುಗಳನ್ನು ಹೊಂದುತ್ತಾನೆ.

4. "ಅಥಯೋನ್ಯಾಂ ದೇವತಾ ಮುಪಾಸ್ತೇನ್ಯೋ ಸಾವನ್ಯೋಹ ಮಸ್ಮೀತಿ ನ ಸವೇದ ಯಥಾ ಪಶು ರೇವಾಂ ಸ ದೇವಾನಾಂ" ಎಂಬ ಶ್ರುತಿ (ಬೃ: ಉ, 1–4–10) ಇನ್ನು ಯಾವನು ಇವು ಬೇರೆ ನಾನು ಬೇರೆ ಎಂದನ್ಯವಾಗಿ ದೇವತೆಯನ್ನು ಉಪಾಸನೆ ಮಾಡುತ್ತಾನೋ ಅವನು ತತ್ತ್ವವನ್ನು ತಿಳಿದವನಲ್ಲ. ಅವನು ಆ ದೇವತೆಗಳಿಗೆ ಪಶುವೆನಿಸಿಕೊಂಡಿರುವನು ಎಂದು ಹೇಳುತ್ತದೆ.

5. "ಯದಾ ಹ್ಯೇವೈಷ ಏತಸ್ಮಿನ್ನುದರ ಮಂತರಂ ಕುರುತೇ ।

ಅಥತಸ್ಯ ಭಯಂ ಭವತಿ" ಎಂಬ ಶ್ರುತಿ (ತೈ: ಉ: 2-5) ಯಾವಾಗ ಈ ತನು ಇದರಲ್ಲಿ ಸ್ವಲ್ಪವಾದ ಭೇದವನ್ನು ಮಾಡಿಕೊಳ್ಳುತ್ತಾನೋ ಅವನಿಗೆ ಭಯ ತಪ್ಪುವದಿಲ್ಲವೆಂದು ಹೇಳುತ್ತದೆ ದ್ವೈತವು ಶ್ರುತಿ ಸಮ್ಮತವಲ್ಲ. ಆದರಿಂದ ಶ್ರುತಿಗಳಿಗೆ ಅದ್ವೈತದಲ್ಲಿಯೇ ತಾತ್ಪರ್ಯವೆಂದರಿಯಬೇಕು.

## — 10 ವ್ಯಾಖ್ಯಾನ ರೀತ್ಯಾ ಅದ್ವೈತ ಸಿದ್ಧಾಂತ —

ವ್ಯಾಖ್ಯಾನವು "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಎಂಬುದು ಅದ್ವೈತ ಸಿದ್ಧಾಂತವೆಂದು ನಿರೂಪಿಸುತ್ತಿಹುದು. ಅದರ ಕ್ರಮವೆಂತೆಂದರೆ.—"ಸದೇವ ಸೌಮ್ಯ ಇದಮಗ್ರ ಆಸೀತ್ ಏಕಮೇವಾ ದ್ವಿತೀಯಂ" ಎಂಬ ಶ್ರುತಿ (ಛಾಂ: ಉ. 6-2-1) ಸೃಷ್ಟಿಗೆ ಪೂರ್ವದಲ್ಲಿ ಎರಡನೆಯದೆಂಬುದು ಇಲ್ಲದೆ ಆತ್ಮನು ಕೇವಲ ಸದ್ರೂಪನಾಗಿ ಆತ್ಮನೊಬ್ಬನೇ ಇದ್ದನೆಂದೂ ಜಗತ್ತು ಅವ್ಯಾಕೃತ ರೂಪದಿಂದ ಬ್ರಹ್ಮಾಭಿನ್ನವಾಗಿ ಬ್ರಹ್ಮನಲ್ಲಿತ್ತೆಂದು "ತ ದ್ಧೇದಂ ತರ್ಹಿ ಅವ್ಯಾಕೃತ ಮಾಸೀತ್" ಎಂದು ಪೇಳುವ ಶ್ರುತಿಯನ್ನು (ಬೃ· ಉ 1-4-7) ಲೆಕ್ಕಿಸದೆ ಉಪೇಕ್ಷಿಸಿ, ಭಾಷ್ಯವನ್ನು ಧಿಕ್ಕರಿಸಿ ಬ್ರಹ್ಮವು ಒಬ್ಬನೇ ಇರುವನೆಂದೂ ಇನ್ನೇನೂ ಇರಲಿಲ್ಲವೆಂದೂ ; ಆದರಿಂದ ಜಗತ್ತು ಅತ್ಯಂತಾಭಾವವೆಂದೂ ಜಗತ್ತೆಂಬುದು ಇಲ್ಲವೇ ಇಲ್ಲದ್ದೆಂದೂ ವ್ಯಾಖ್ಯಾನವು ಜಗತ್ತನ್ನು ವಿವರಿಸಿರುವದು. "ಜಗತ್ತು ಕಂಡು ಬರುತ್ತದೆಯಲ್ಲ !" ಎಂಬ ಆಕ್ಷೇಪಕ್ಕೆ ಸಮಾಧಾನವಾಗಿ ವ್ಯಾಖ್ಯಾನವು ರಜ್ಜುವಿನಲ್ಲಿ ಕಂಡು ಬರುವ ಸರ್ಪದಂತೆಯೂ, ಸ್ವಪ್ನ ಪ್ರಪಂಚದಂತೆಯೂ, ಮೃಗತೃಷ್ಣೋದಕದಂತೆಯೂ (ಬಿಸಿಲಿನಿಂದ ಕಾದ ಮರಳು ನೀರಿರುವಂತೆ ಹೊಳೆಯುತ್ತಿದ್ದರೂ ಅಲ್ಲಿ ಯಾವ ನೀರೂ ಇಲ್ಲದಿರುವಂತೆ) ಜಗತ್ತೆಂಬುದು ತೋರಿ ಬರುವದೆಂದೂ ಅವಿದ್ಯಾ ಕಲ್ಪಿತವೆಂದೂ, ಜ್ಞಾನ ಬಾಧ್ಯವೆಂದೂ ವ್ಯಾಖ್ಯಾನ ಮಾಡಿ ಜಗನ್ಮಿಥ್ಯಾ ಎಂದೂ ನಿರೂಪಿಸಿರುವದು. ಬ್ರಹ್ಮ, ಜಗತ್ತು, ಜೀವ-ಇವುಗಳಲ್ಲಿ ವ್ಯಾಖ್ಯಾನವು ಸೃಷ್ಟಿ ಶ್ರುತಿಗಳನ್ನು ತಿರಸ್ಕರಿಸಿರುವದರಿಂದ ಬ್ರಹ್ಮವು ಸಿದ್ಧಿಸಲಿಲ್ಲ : ಜಗತ್ತು ಶ್ರುತಿ ಭಾಷ್ಯ ವಿರುದ್ಧವಾಗಿ ''ಸತ್ತ್ವಾಚ್ಚಾವ ರಸ್ಯ" ಎಂಬ ಸೂತ್ರವನ್ನು (ಬ್ರ: ಸೂ: 2-1-16) ತಿರಸ್ಕರಿಸಿ ಮಿಥ್ಯಾ ಭೂತವೆಂದು

ನಿಶ್ಚಯಿಸಿ ಜಗತ್ತನ್ನು ಇಲ್ಲವೆನಿಸಿರುವದು ಉಳಿದ ಜೀವನನ್ನೇ ಬ್ರಹ್ಮವೆಂದೂ ಅವನು ಬೇರೆ ಅಲ್ಲವೆಂದೂ ವಿವರಿಸಿ ನಿರೂಪಿಸಿರುವದು ಇದು ವ್ಯಾಖ್ಯಾನ ರೀತ್ಯಾ ಅದ್ವೈತ ಸಿದ್ಧಾಂತವೆಂದು ಹೇಳಲ್ಪಟ್ಟಿರುವದು ಆದರೆ ಇದು ಶೂನ್ಯ ವಾದವೆನಿಸುವದೇ ಹೊರತು ಅದ್ವೈತ ಸಿದ್ಧಾಂತವೆನಿಸದು ಹೇಗೆಂದರೆ.— ವ್ಯಾಖ್ಯಾನವು ಸೃಷ್ಟಿಯನ್ನು, ಬ್ರಹ್ಮವು ಸರ್ವಜ್ಞನೆಂದೂ, ಸರ್ವ ಶಕ್ತನೆಂದೂ, ಜಗತ್ಕಾರಣನೆಂದೂ ಬೋಧಿಸುವ ಶ್ರುತಿಗಳನ್ನೆಲ್ಲಾ ಅಲ್ಲಗಳೆದು, ಬ್ರಹ್ಮವು ಬರಿಯ ಚೈತನ್ಯವೆಂದು ಹೇಳಿ ಬರಿಯ ಚೈತನ್ಯವು ಬ್ರಹ್ಮವೆಂತಾಗುವದೆಂದು ಹೇಳಿರುವದಿಲ್ಲವಾದ್ದರಿಂದ ಬ್ರಹ್ಮವು ಸಿದ್ಧಿಸಲಿಲ್ಲವೆಂದೇ ಆಯಿತು. ಬ್ರಹ್ಮವು ಸಿದ್ಧಿಸುವದಕ್ಕಾಗಿ ಸ್ವದೇಹ ಪರಿಚ್ಛಿನ್ನ ಚೈತನ್ಯನಾದ ಪ್ರತ್ಯಗಾತ್ಮನನ್ನೆ ಬ್ರಹ್ಮ ವೆಂದು ಹೇಳಿ ಅವನು ಬೇರೆ ಅಲ್ಲವೆಂದು ಪ್ರತಿಪಾದಿಸಿರುವದು. ಜೀವನನ್ನು ಬ್ರಹ್ಮವೆಂದು ಹೇಳಿದಂತಾಯಿತೇ ಹೊರತು ಬ್ರಹ್ಮ ಸ್ವರೂಪವನ್ನು ಬೋಧಿಸಿ ಜೀವನ ಜೀವತ್ವವನ್ನು ಕಳೆದು ಅವನೇ ತನ್ನ ನಿಜ ರೂಪದಿಂದ ಪರಮಾತ್ಮನೇಯಾಗಿರುವನೆಂದು ವಿವರಿಸಿರುವದಿಲ್ಲ ತೋರಿಸಿರುವದಿಲ್ಲ. ತತ್ತ್ವ ವನ್ನು ತಿಳಿದಿಲ್ಲ ಬ್ರಹ್ಮನಾಗಲಿಲ್ಲ. ಬರಿಯ ಚೈತನ್ಯವು ಬ್ರಹ್ಮವು ಆಗುವದು ಹೇಗೆ? ಈ ಆಕ್ಷೇಪಕ್ಕೆ ಸಮಾಧಾನವನ್ನು ಹೇಳಿರುವದಿಲ್ಲ. ಭಾಷ್ಯ ಸಮ್ಮತ ಜ್ಞಾನವೇ ಸಮ್ಯಕ್ ಜ್ಞಾನವು. ಸಮ್ಯಕ್ ಜ್ಞಾನವಿಲ್ಲದೆ ಮಿಥ್ಯಾಜ್ಞಾನ ನಿವೃತ್ತಿ ಯಾಗದು. ಸಮ್ಯಕ್ ಜ್ಞಾನದಿಂದಲೇ ಶ್ರುತ್ಯುಕ್ತ ಬ್ರಹ್ಮ ಜ್ಞಾನವು. ಬ್ರಹ್ಮ ಜ್ಞಾನದಿಂದಲೆ ಬ್ರಹ್ಮನಾಗುವದು. ಅದೇ ಜೀವನ್ಮುಕ್ತಿಯು. ಬರಿಯ ಚೈತನ್ಯವು ಪಶ್ವಾದಿಗಳಲ್ಲಿಯೂ ಇದೆ. ಅದು ಬ್ರಹ್ಮವಾಗುವದೇನು? ಆದರಿಂದ ಬ್ರಹ್ಮವು ಸಿದ್ಧಿಸಲಿಲ್ಲವೆಂದೇ ಅರ್ಥ,

ಜಗತ್ತು ಅಭಾವವೆಂದು ಅದನ್ನು ಇಲ್ಲವೆನ್ನುವಾಗ - ಜಗತ್ತು ಬ್ರಹ್ಮ ಸ್ವರೂಪವೆಂದು ಹೇಳುವ ಅಗತ್ಯವೇ ಇಲ್ಲ. "ಬ್ರಹ್ಮೈವೇ ದಂಸರ್ವಂ", "ಆತ್ಮೈವೇದಂ ಸರ್ವಂ"; "ಸರ್ವಂ ಖಲ್ವಿದಂ ಬ್ರಹ್ಮ" ಇತ್ಯಾದಿ ಶ್ರುತಿ ಗಳನ್ನೆಲ್ಲಾ ತಿರಸ್ಕರಿಸಿದಂತಾಯಿತು. ಆದರಿಂದ ಬ್ರಹ್ಮವೂ ಇಲ್ಲ. ಜಗತ್ತೂ ಇಲ್ಲ

ಇನ್ನು ಉಳಿದ ಜೀವನನ್ನು ಅವನೇ ಬ್ರಹ್ಮವೆಂದೂ ಅವನು ಬೇರೆ ಅಲ್ಲವೆಂದೂ ಇದೇ ಅದ್ವೈತ ಸಿದ್ಧಾಂತವೆಂದೂ ನಿರೂಪಿಸಿರುತ್ತದೆ ಆದರೆ ಇದು ಭಾಷ್ಯ ಸಿದ್ಧಾಂತಕ್ಕೆ ವಿರುದ್ಧವಾಗಿದೆ, ಹೇಗೆಂದರೆ, ಭಾಷ್ಯವು ಬ್ರಹ್ಮ ಸ್ವರೂಪವನ್ನು ಶ್ರುತ್ಯಾಧಾರಗಳಿಂದ ಸಮರ್ಥಿಸಿ ಅವನು ಸರ್ವಜ್ಞನೆಂದೂ, ಸರ್ವಶಕ್ತವೆಂದೂ, ಅದರಿಂದ ಅವನೇ ಜಗತ್ಕಾರಣನೆಂದೂ ಸಮರ್ಥಿಸಿ, ಜಗತ್ತು ನಾಮ ರೂಪಾತ್ಮಕವಾಗಿದ್ದರೂ ಅದು ಬ್ರಹ್ಮದ ಕಾರ್ಯವೆಂದೂ ಬ್ರಹ್ಮವೇ ಕಾರಣವೆಂದೂ ಕಾರ್ಯಕಾರಣಗಳನನ್ಯವೆಂಬ ನ್ಯಾಯದಂತೆ ಜಗತ್ತು ಬ್ರಹ್ಮ ಸ್ವರೂಪವೇ ಎಂದೂ, ಬ್ರಹ್ಮವು ಏಕೋದ್ವಿತೀಯವೆಂದೂ ನಿಶ್ಚಯಿಸಿ ಪ್ರತಿಪಾದಿಸುತ್ತದೆ.

ಜೀವನೆಂಬುವನು ಪರಮಾತ್ಮನಿಗನ್ಯವಾಗಿ ದ್ವಿತೀಯ ಚೈತನ್ಯವು ಎನಿಸಿ ಯಾರೂ ಇಲ್ಲವೆಂದೂ ಸರ್ವಜ್ಞನಾದ ಪರಮಾತ್ಮನೇ ಅವಿದ್ಯೋಪಾಧಿ ಯಿಂದ ಕರ್ತಭೋಕ್ತನೆನಿಸಿ ಸುಖದುಃಖಾನ್ವಿತನಾಗಿ ಸಂಸಾರಿಯಾಗಿರುವನೆಂದೂ ಸಮ್ಯಕ್ ಜ್ಞಾನದಿಂದ ಅವಿದ್ಯೆಯು ನಷ್ಟವಾಗಲು ಅವನೇ ಬ್ರಹ್ಮಸ್ವರೂಪ ನೆಂದರಿಯುವದರಿಂದ ಎಲ್ಲವು ಬ್ರಹ್ಮ ಸ್ವರೂಪನೆಂಬ ಅದ್ವೈತವೇ ಸಿದ್ಧಾಂತ ವೆನಿಸುವದು, ಹೀಗೆ ಬ್ರಹ್ಮವು, ಜಗತ್ತು, ಜೀವಎಂಬೀ ಮೂರು ಭಿನ್ನವಾಗಿ ಕಾಣುತ್ತಿದ್ದರೂ ಪರಮಾರ್ಥವಾಗಿ ಈ ಮೂರೂ ಒಂದಾಗಿ ಅದ್ವೈತವೇ ಪರಮಾರ್ಥವೆನಿಸುವುದು. ಅಲ್ಲಿಗೆ ಅವುಗಳ ಸತ್ತ್ವವು ಒಂದೇ ಎಂದಾಯಿತು. ಬ್ರಹ್ಮಕ್ಕೆ ಭಿನ್ನವೆನಿಸಿ ಕಾಣುವುದೆಲ್ಲವು ಅವಿದ್ಯ ಎಂದಾಯಿತು ಆದರಿಂದ ಅವಿದ್ಯೆಯಿಂದಲೇ ಸರ್ವವ್ಯವಹಾರವು ಸಿದ್ಧಿಸುವದೆಂದೂ, ಆತ್ಮಜ್ಞಾನವು ಸಿದ್ಧಿಸಿದ ಬಳಿಕ ಎಂದರೆ ಎಲ್ಲವೂ ಬ್ರಹ್ಮವೆಂಬ ಜ್ಞಾನಉಂಟಾಗಿ ಆ ವಿವೇಕಿಗೆ ವ್ಯವಹಾರಾಭಾವವನ್ನು ಶ್ರುತಿಯೇ ಹೇಳುತ್ತಿದೆ ಎಂದು ಭಾಷ್ಯವು ಬೋಧಿಸುತ್ತಿರುವುದು. (ಬೃ: ಉ 4–5–15).

# 11 ವ್ಯಾಖ್ಯಾನವು ನಿರಾಕರಿಸಿರುವ ಸೃಷ್ಟ್ಯಾದಿ ಶ್ರುತಿಗಳು —

## — ತೈತ್ತಿರೀಯೋಪನಿಷತ್ತು —

1 "ಏತಸ್ಮಾದಾತ್ಮನ ಆಕಾಶಸ್ಸಂಭೂತಃ" ಎಂಬ ಶ್ರುತಿ ಈ ಆತ್ಮನಿಂದಲೇ ಆಕಾಶಾದಿಗಳುಂಟಾಯಿತೆಂದು ಬೋಧಿಸುತ್ತದೆ.॥ (2–2).

2 "ಸೋಽಕಾಮಯತ, ಬಹೋಸ್ಯಾಂಪ್ರಜಾಯೇಯೇತಿ" ಎಂಬ ಶ್ರುತಿ ಆ ಪರಮಾತ್ಮನು ನಾನು ಬಹುವಾಗುವೆನು ಹುಟ್ಟುವೆನು ಎಂದು ಕಾಮಿಸಿದನು ಎಂದು ತಿಳಿಸುತ್ತದೆ ॥ (ತೈ ಮಂ: 4).

3 "ಇದಗೌಂ ಸರ್ವಮಸೃಜತ ಯದಿದಂಕಿಂಚ" ಎಂಬ ಶ್ರುತಿ ಕಾಣುವುದೆಲ್ಲವನ್ನು ಆ ಪರಮಾತ್ಮನು ಸೃಷ್ಟಿಸಿರುವನೆಂದು ಹೇಳುತ್ತದೆ. (ತೈ. ಉ· 2–5)

4 "ತತ್ ಸೃಷ್ಟ್ವಾ। ತದೇವಾನು ಪ್ರಾವಿಶತ್" ಎಂಬ ಶ್ರುತಿ (ತೈ· 2–6) ಅದನ್ನು ಸೃಷ್ಟಿಸಿ ಸಕಲ ಭೂತಗಳಲ್ಲಿಯೂ ತನ್ನನಿಜರೂಪವನ್ನು ತಿಳಿಸಿಕೊಡಲು ಅವುಗಳಲ್ಲಿ ತಾನೇ ಅನುಪ್ರವೇಶ ಮಾಡಿರುವನೆಂದು ಬೋಧಿಸುತ್ತದೆ,

5 "ತಧಾತ್ಮಾನಗೌಂ ಸ್ವಯಮಕುರುತ" ಎಂಬ ಶ್ರುತಿ (ತೈ: 2–6–1) ಆತ್ಮನು ತಾನೇ ತನ್ನನ್ನೇ ಜಗದ್ರೂಪವಾಗಿ ತನ್ನ ಸ್ವರೂಪ ಹಾನಿ ಇಲ್ಲದೆ ಮಾಡಿಕೊಂಡಿರುವನೆಂದು ಬೋಧಿಸುತ್ತದೆ

6 "ಯತೋವಾ ಇಮಾನಿ ಭೂತಾನಿ ಜಾಯಂತೆ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ, ತದ್ವಿಜಿಜ್ಞಾಸಸ್ವ, ತದ್ಬ್ರಹ್ಮೇತಿ" ಎಂಬ ಶ್ರುತಿ (ತೈ ಉ: 3–1), ಈ ಭೂತಗಳು ಯಾವದರಿಂದ ಹುಟ್ಟುತ್ತವೆಯೋ, ಅವು ಯಾವನಿಂದ ಜೀವಿಸುತ್ತವೆಯೋ, ನಿಯತ ಕಾಲ-

ನಂತರ ಅವೆಲ್ಲಾ ಯಾವನನ್ನು ಸೇರಿಕೊಳ್ಳುತ್ತವೆಯೋ ಅದೇ ಬ್ರಹ್ಮವು, ಅದನ್ನು ವಿಚಾರಮಾಡಿ ತಿಳಿಯುವವನಾಗು ಎಂದು ಬೋಧಿಸುತ್ತದೆ

## — ಐತರೇಯೋಪನಿಷತ್ತು —

1 "ಓಂ ಆತ್ಮಾವಾ ಇದಮೇಕ ಏವಾಗ್ರ ಆಸೀತ್। ನಾನ್ಯತ್ಕಿಂಚನ ಮಿಷತ್। ಸಈಕ್ಷತಲೋಕಾನ್ನು ಸೃಜಾಇತಿ" ಎಂಬ ಶ್ರುತಿ (1–1–2) ಸೃಷ್ಟಿಗೆ ಪೂರ್ವದಲ್ಲಿ ಆತ್ಮನೊಬ್ಬನೇ ಇದ್ದನೆಂದೂ, ಅಲುಗಾಡುವ ಮತ್ತೆ ಬೇರೆ ಯಾವದೂ ಇರಲಿಲ್ಲವೆಂದೂ, ಆ ಆತ್ಮನು ಲೋಕಗಳನ್ನು ಸೃಷ್ಟಿ ಮಾಡುವೆನೆಂದು ಯೋಚಿಸಿದನೆಂದೂ ಬೋಧಿಸುತ್ತದೆ.

2 "ಸಇಮಾಲ್ಲೋಕನ್ನಸೃಜತ" ಎಂಬ ಶ್ರುತಿ (1–1–2) ಅವನು ಈ ಲೋಕಗಳನ್ನು ಸೃಜಿಸಿದನೆಂದು ಹೇಳಿದೆ

## — ಮುಂಡಕೋಪನಿಷತ್ತು —

1 "ಯಃಸರ್ವಜ್ಞಃಸರ್ವ ವಿದ್ಯಸ್ಯಜ್ಞಾನಮಯಂ ತಪಃ। ತಸ್ಮಾತ್ ಏತದ್‌ಬ್ರಹ್ಮನಾಮರೂಪಮನ್ನಂಚಜಾಯತೇ" ಎಂಬ ಶ್ರುತಿ (1–1–9). ಯಾವನು ಸರ್ವಜ್ಞನೋ, ಸರ್ವವಿದನೋ, ಅವನಿಂದ ಪ್ರಾಣರೂಪ ಹಿರಣ್ಯಗರ್ಭನೂ ನಾಮರೂಪಗಳೂ ಅನ್ನವೂ ಉಂಟಾಯಿತು ಎಂದು ಬೋಧಿಸುತ್ತದೆ

2 "ಏತಸ್ಮಾಜಯತೇ ಪ್ರಾಣೋಮನಃ ಸರ್ವೇಂದ್ರಿಯಾಣಿಚ । ಖಂವಾಯು ರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯಧಾರಿಣೀ" ಎಂಬ ಶ್ರುತಿ (2–1–3). ಈತನಿಂದ ಪ್ರಾಣವು, ಮನಸ್ಸು, ಸರ್ವೇಂದ್ರಿಯಗಳು, ಆಕಾಶವು ವಾಯುವು, ಅಗ್ನಿ, ಜಲವು, ಎಲ್ಲವನ್ನು ಧರಿಸಿರುವ ಭೂಮಿ—ಇವೆಲ್ಲವೂ ಆ ಪರಮಾತ್ಮನಿಂದಲೇ ಹುಟ್ಟುತ್ತವೆಂದು ಬೋಧಿಸುತ್ತದೆ.

3 "ಯದಾಪಶ್ಯಃ ಪಶ್ಯತೇರುಕ್ಮವರ್ಣಂಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ। ತದಾವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ

ಸಾಮ್ಯಮುಪೇತಿ" ಎಂಬ ಶ್ರುತಿ (3–1–3). ಯಾವಾಗ ಜೀವನು ಜಗತ್ಕರ್ತನಾದ ಪುರುಷನನ್ನು ಅರಿತುಕೊಳ್ಳುವನೋ ಆಗ ಅವನು ಪುಣ್ಯ ಪಾಪಗಳನ್ನು ಕಳೆದುಕೊಂಡು ನಿರಂಜನನಾಗಿ–ನಿರ್ಮಲನಾಗಿ–ಪರಮಾದ್ವೈತ ಭಾವವನ್ನು ಹೊಂದುವನೆಂದು ಬೋಧಿಸುತ್ತದೆ.

(ಇಲ್ಲಿ ಜಗತ್ಕಾರಣನಾದ ಬ್ರಹ್ಮನ ಜ್ಞಾನದಿಂದಲೇ ಮೋಕ್ಷವೆಂದು ಹೇಳಿರುವದು ಗಮನಾರ್ಹವು. ವ್ಯಾಖ್ಯಾನವು. ಬ್ರಹ್ಮ ಜಗತ್‌ಕಾರಣತ್ವವನ್ನು ನಿರಾಕರಿಸಿರುವದರಿಂದ ಸ್ವದೇಹ ಪರಿಚ್ಛಿನ್ನ ಚೈತನ್ಯಾತ್ಮಜ್ಞಾನದಿಂದ ಮೋಕ್ಷ ಪ್ರಾಪ್ತಿಯಾಗದೆಂಬುದನ್ನು ಲಕ್ಷಿಸಬೇಕು.॥).

## — ಪ್ರಶ್ನೋಪನಿಷತ್ತು —

1 "ಆತ್ಮನ ಏಷಪ್ರಾಣೋ ಜಾಯತೇ" ಎಂಬ ಶ್ರುತಿ (3೦. ಮ) ಆತ್ಮನಿಂದಲೇ ಪ್ರಾಣನು ಹುಟ್ಟುತ್ತಾನೆಂದು ಬೋಧಿಸುತ್ತದೆ

2 "ಸಪ್ರಾಣಮಸೃಜತ। ಪ್ರಾಣಾಚ್ಛ್ರದ್ಧಾಂಖವಾಯು ಜ್ಯೋತಿರಾಪಃ ಪ್ರಥಿವೀಂದ್ರಿಯಂ ಮನಃ" ಎಂಬ ಶ್ರುತಿ (6–4) ಆ ಪರಮಾತ್ಮನು ಪ್ರಾಣವನ್ನು ಶ್ರದ್ಧೆಯನ್ನು ಪಂಚಭೂತಗಳನ್ನು ಇಂದ್ರಿಯಗಳನ್ನು ಮನಸ್ಸನ್ನು ಸೃಜಿಸಿದನೆಂದು ಬೋಧಿಸುತ್ತದೆ. ಇದರಿಂದ ಬ್ರಹ್ಮವೇ ಸೃಷ್ಟಿ ಕರ್ತನೆಂಬುದು ಸ್ಪಷ್ಟವು.

## — ಮಾಂಡೂಕ್ಯೋಪನಿಷತ್ತು —

"ಏಷ ಸರ್ವೇಶ್ವರ, ಏಷ ಸರ್ವಜ್ಞ, ಏಷೋಂತರ್ಯಾಮಿ, ಏಷಯೋನಿ ಸರ್ವಸ್ಯ ಪ್ರಭವಾಸ್ಯ ಯೌಹಿ ಭೂತಾನಾಂ" (ಮಂ 6) ಎಂಬ ಶ್ರುತಿ ಸುಷುಪ್ತಾತ್ಮನಾದ ಪ್ರಾಜ್ಞನನ್ನು ಸರ್ವೇಶ್ವರನೆಂದೂ, ಸರ್ವಜ್ಞನೆಂಧೂ, ಅಂತರ್ಯಾಮಿಯೆಂದೂ, ಅವನೇ ಸಮಸ್ತ ಭೂಗಳ ಉತ್ಪತ್ತಿ ಸ್ಥಿತಿ ಪ್ರಲಯತಗಳಿಗೆ ಕಾರಣನೆಂದೂ ಬೋಧಿಸುತ್ತದೆ. ಜೀವ ಪ್ರಾಜ್ಞರಿಗೇಕತ್ವವನ್ನು ಹೇಳಿ ಪ್ರಾಜ್ಞನೇ ಸರ್ವಜ್ಞನೆಂದು ಸರ್ವೇಶ್ವರನೆಂದೂ ತಿಳಿಸಿ ಕೊಡುತ್ತದೆ."

## — ಛಾಂದೋಗ್ಯೋಪನಿಷತ್ತು —

1 "ಅಸ್ಯ ಲೋಕಸ್ಯ ಕಾಗತಿ ರಿತ್ಯಾಕಾಶ ಇತಿ ಹೋ ವಾಚ. ಸರ್ವಾಣಿ ಹವ ಇಮಾನಿ ಭೂತಾನಿ ಆಕಾಶ ದೇವ ಸಮುತ್ಪದ್ಯಂತ ಆಕಾಶಂ ಪ್ರತ್ಯಸ್ತಂ ಯಂತಿ । ಆಕಾಶೋ ಹ್ಯೇ ವೈಭ್ಯೋ ಜ್ಯಾಯಾ ನಾಕಾಶಃ ಪರಾಯಣಂ" ಎಂಬ ಶ್ರುತಿ (ಛಾಂ: ಉ 1–9–1) ಈ ಲೋಕಕ್ಕೆ ಆಕಾಶವೇ, ಗತಿಯು. ಏಕೆಂದರೆ, ಈ ಸಕಲ ಭೂತಗಳು ಆಕಾಶದಿಂದಲೇ ಹುಟ್ಟಿ ಆಕಾಶ ದಲ್ಲಿ ಪ್ರತ್ಯಸ್ತಮಯವಾಗುತ್ತವೆ. ಆಕಾಶವೆಂದರೆ ಬ್ರಹ್ಮವು ಆಕಾಶವೇ ಎಲ್ಲಕ್ಕಿಂತಲೂ ದೊಡ್ಡದು. ಆಕಾಶವೇ ಎಲ್ಲೂ್ಕ ಆಶ್ರಯವು ॥

2 "ತಾವಾ ನಸ್ಯ ಮಹಿಮಾ । ತತೋ ಜ್ಯಾಯಾಗೌಂಶ್ಚ ಪೂರುಷಃ । ಪಾದೋಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯ ಅಮೃತಂ ದಿವಿ" ಎಂಬ ಶ್ರುತಿ (ಛಾಂ· 3–12–6) ಇದರ ಮಹಿಮೆಯು ಅಷ್ಟು. ಆದರೆ ಪುರುಷನು ಆದಕ್ಕಿಂತ ಹೆಚ್ಚು ದೂಡ್ಡವನು. ಎಲ್ಲಾ ಭೂತಗಳು ಇದರ ಒಂದು ಪಾದವು. ಇದರ ಅಮೃತವಾದ ಮೂರು ಪಾದಗಳು ದಿವದಲ್ಲಿರುವವೆಂದು ಬೋಧಿಸುತ್ತದೆ

3 "ಸರ್ವಂ ಖಲ್ವಿದಂ ಬ್ರಹ್ಮ, ತಜ್ಜಲಾನಿತಿ ಶಾಂತ ಉಪಾಸೀತ" ಎಂಬ ಶ್ರುತಿ (3–14–11) ಸರ್ವವೂ ಬ್ರಹ್ಮವೇ ಬ್ರಹ್ಮದಿಂದ ಹುಟ್ಟಿದ್ದ ರಿಂದ ತಜ್ಜವೆಂದೂ ; ವಿಪರೀತ ಕ್ರಮದಿಂದ ಬ್ರಹ್ಮದಲ್ಲಿಯೇ ಲಯವಾಗಿ ಆದರ ರೂಪದಿಂದ ಉಳಿದಿರುವದರಿಂದ ತಲ್ಲವೆಂದೂ ; ಸ್ಥಿತಿ ಕಾಲದಲ್ಲಿ ಆದರಲ್ಲಿಯೇ ಇದ್ದು ಜೀವಿಸುತ್ತಾ ವ್ಯವಹರಿಸುತ್ತಿರುವದರಿಂದ ತದನವೆನಿಸುವ ದೆಂದೂ ಹೇಳಿದೆ. ಅದನ್ನು ಶಾಂತವಾಗಿ ಉಪಾಸನೆಯನ್ನು ಮಾಡಬೇಕೆಂದು ಬೋಧಿಸುವದು.

4 "ತದೈಕ್ಷತ, ಬಹುಸ್ಯಾಂ ಪ್ರಜಾಯೇ ಯೇತಿ, ತತ್ತೇಜೋ ಸೃಜತ" ಎಂಬ ಶ್ರುತಿ (ಛಾಂ: 6–2–3) ಬ್ರಹ್ಮವು ಬಹುವಾಗುವೆನೆಂದು ಯೋಚಿಸಿ ನೋಡಿ ತೇಜಸ್ಸನ್ನು ಸೃಜಿಸಿತೆಂದು ಜಗತ್ತಿಗೆ ಚೇತನ ಕಾರಣತ್ವವನ್ನೇ ಹೇಳಿರು

ವದರಿಂದ ವ್ಯಾಖ್ಯಾನವು ಹೇಳುವ ಜಗನ್ಮಿಥ್ಯಾವಾದವು ಶ್ರುತಹಾನ್ಯಶ್ರುತ ಕಲ್ಪನಾ ಎಂಬುದು ಸ್ಪಷ್ಟವು

5 "ಸೇಯಂ ದೈವತ್ಯೈಕ್ಷತ ಹಂತಾಹಮಿ ಮಾಸ್ತಿಸ್ರೋ ದೇವತಾ ಅನೇನ ಜೀವೇ ನಾತ್ಮನಾನು ಪ್ರವಿಶ್ಯ ನಾಮ ರೂಪೇ ವ್ಯಾಕರ ವಾಣಿ" ಎಂಬ ಶ್ರುತಿ (ಛಾಂ. 6-3-2) ಆ ದೇವತೆಯು "ಒಳ್ಳೇದು. ನಾನು ಈ ಮೂರು ದೇವತೆಗಳನ್ನು ಈ ಜೀವನೆಂಬ ಆತ್ಮನ ರೂಪದಿಂದ ಅನುಪ್ರವೇಶಮಾಡಿ ನಾಮ ರೂಪಗಳನ್ನು ವಿಂಗಡಿಸುವೆನೆಂದು ಯೋಚಿಸಿ ನೋಡಿತೆಂದು ಹೇಳಿದೆ

## — 12 ಭಾಷ್ಯವನ್ನು ಧಿಕ್ಕರಿಸಿರುವದು —

1 ಈ ರೀತಿಯಲ್ಲಿ ಎಲ್ಲಾ ಶ್ರುತಿಗಳು, ತತ್ಸಂಬಂಧ ಭಾಷ್ಯವು ಬ್ರಹ್ಮವು ಸರ್ವಜ್ಞ ಸರ್ವಶಕ್ತನಾದ್ದರಿಂದ ಈ ಪರಮಾದ್ಭುತ ವಿಚಿತ್ರ ಜಗತ್ತನ್ನು ತನ್ನ ಮಾಯಾ ಶಕ್ತಿಯಿಂದ ತನ್ನ ಸ್ವರೂಪ ಹಾನಿ ಇಲ್ಲದೆ ಸೃಷ್ಟಿಸಿರುವನೆಂದೂ, ಅದರ ಪ್ರವೃತ್ತಿಯನ್ನು ನಿಯಮಿಸಿರುವನೆಂದೂ, (ತೈ·2 -7-7), (ಭೀಷಾ ಸ್ಮಾದ್ವಾತಃ ಪವತೇ ॥) ನಿಯತ ಕಾಲಾನಂತರ ಬ್ರಹ್ಮದಲ್ಲಿಯೇ ಪ್ರಲಯ ವಾಗುವದೆಂದೂ ಪ್ರಲಯವಾದರೂ ಶಕ್ತ್ಯವಶೇಷವಾಗಿರುವದೆಂದೂ ಪುನಃ ಅದೇ ಶಕ್ತಿ ಮೂಲಕವಾಗಿ ಹಿಂದಿನಂತೆಯೇ ಸೃಷ್ಟ್ಯಾದಿಗಳಾಗುತ್ತಿರುವವೆಂದೂ ಬೋಧಿಸುತ್ತಿರುವದನ್ನು ವ್ಯಾಖ್ಯಾನವು ಧಿಕ್ಕರಿಸಿ ಸ್ವಪಕ್ಷವನ್ನು ಸಾಧಿಸುತ್ತಾ ಬ್ರಹ್ಮದ ಜಗತ್ಕಾರಣತ್ವವನ್ನು ನಿರಾಕರಿಸಿ ಜಗನ್ಮಿಥ್ಯಾ ವಾದವನ್ನು ಹೂಡಿರುವದು ಶ್ರುತಹಾನ್ಯಶ್ರುತ ಕಲ್ಪನಾ ಎಂಬ ಪ್ರಬಲ ದೋಷಯುಕ್ತವಾಗಿದೆ. ಬ್ರಹ್ಮ ಜಗತ್ಕಾರಣವಲ್ಲವೆಂದರೆ ಬ್ರಹ್ಮವು ಇರುವದೆಂಬುದೇ ಸಿದ್ಧಿಸುವದಿಲ್ಲ. ಅದಕ್ಕಾಗಿಯೇ ವ್ಯಾಖ್ಯಾನವು ಜೀವನೇ ಬ್ರಹ್ಮವೆಂದೂ ಬೇರೆ ಅಲ್ಲವೆಂದೂ, ಜಗತ್ತು ಇಲ್ಲವೆಂಬುದೇ, ಭಾಷ್ಯ ಸಮ್ಮತ ಅದ್ವೈತ ಸಿದ್ಧಾಂತವೆಂದೂ ನಿರೂಪಿಸುತ್ತದೆ. ಆದರೆ ಇದು ಶ್ರುತಿ ಭಾಷ್ಯ ವಿರುದ್ಧವು. ಜಗತ್ತಿಗೆ ಬ್ರಹ್ಮವು ಅಭಿನ್ನ ನಿಮಿತ್ತೋಪಾದಾನ ಕಾರಣವೆಂದಂಗೀಕರಿಸಿ ಜಗತ್ತು ಪುನಃ ಮಿಥ್ಯಾ ಭೂತವೆಂದು ಹೇಳುವದು ವಿಪ್ರತಿಷಿದ್ಧವು ॥ (ಬ್ರ· ಸೂ: 11-4-23)

2 ಮಹಾ ಪಂಡಿತೋತ್ತಮರಾದ ಶ್ರೀ ಸಚ್ಚಿದಾನಂದೇಂದ್ರ

ಸರಸ್ವತೀ ಸ್ವಾಮಿಗಳವರು "ಜಗತ್ಕಾರಣವಾಗಿರುವನು ಮಾಯಾ ವಿಶಿಷ್ಟನಾದ ಈಶ್ವರ ಅಥವಾ ಅಪರ ಬ್ರಹ್ಮವೆಂದೂ ಹೇಳಿರುತ್ತದೆ ಅದರೆ ಇದು ವ್ಯಾಖ್ಯಾನಕಾರರ ಕಲ್ಪನಾ ಮಾತ್ರವಾಗಿರುತ್ತದೆ. ಜಗತ್ಕಾರಣ ಬ್ರಹ್ಮವು ಪರಬ್ರಹ್ಮವೆಂಬುದೇ ಆಚಾರ್ಯರ ಕಂಠೋಕ್ತವಾದ ಅಭಿಪ್ರಾಯವು. ಇದು ಭಾಷ್ಯದಿಂದಲೇ ವ್ಯಕ್ತವಾಗುತ್ತಿದೆ ಇದೂ ಅಲ್ಲದೇ ಜಗತ್ಕಾರಣವಾದ ಪರ ಬ್ರಹ್ಮವೇ ಜಗತ್ ಸೃಷ್ಟ್ಯಾದಿಗಳನ್ನು ಮಾಡುತ್ತಾ ಈಶ್ವರನೆನಿಸುವನೆಂದೂ ಹೇಳಿರುವದು ಹಲವಾರು ಕಡೆಗಳಲ್ಲಿ ಸೂರ್ಯ ಪ್ರಕಾಶದಷ್ಟು ಸ್ಫುಟವಾ ಗಿರುತ್ತದೆ. ಹೀಗಿದ್ದರೂ ವ್ಯಾಖ್ಯಾನಕಾರನು ಈಶ್ವರನು ಮಾಯಾ ವಿಶಿಷ್ಟ ನೆಂದು ಕಲ್ಪಿಸಿರುವದು ಆತನು ಭಾಷ್ಯಕಾರರನ್ನು ಕಡೆಗಣಿಸಿರುವನೆಂಬುದಕ್ಕೆ ಅಡ್ಡಿಯೇನು ?" ಎಂದು ಬರೆದಿರುತ್ತಾರೆ.

3 "ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ । ನ ತತ್ ಸಮ ಶ್ಚಾಭ್ಯಧಿ ಕಶ್ಚ ದೃಶ್ಯತೇ । ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾ ಚ ಇತಿ ॥ (ಶ್ವೇ 6–8) ಎಂಬ ಶ್ರುತಿ ಬ್ರಹ್ಮಕ್ಕೆ ಕಾರ್ಯವೂ ಕರಣವೂ ಇರುವದಿಲ್ಲ ಅವನು ಸಮಾನಾಧಿಕ ವರ್ಜಿತನು. ಅವನ ಶಕ್ತಿಯು ವಿವಿಧವಾಗಿರುವದು ಸ್ವಾಭಾವಿಕವಾದ ಜ್ಞಾನ ಬಲದಿಂದಾಗಿರುವ ಕ್ರಿಯೆಯನ್ನುಳ್ಳವನು ಎಂದು ಶ್ರುತಿಯು ಭಾಷ್ಯವು ಬೋಧಿಸುತ್ತಿಹುದು

4 "ಅಧಿಕಂತು ಭೇದ ನಿರ್ದೇಶಾತ್" ಎಂಬ ಸೂತ್ರದ ಭಾಷ್ಯವು (ಬ್ರ: ಸೂ: 2–1–32) ಪರಮಾತ್ಮನಿಗೆ ಜ್ಞಾನ ಪ್ರತಿ ಬಂಧವಾಗಲಿ ಶಕ್ತಿ ಪ್ರತಿಬಂಧವಾಗಲಿ ಎಲ್ಲಿಯೂ ಇಲ್ಲವೆಂದು ಬೋಧಿಸುತ್ತದೆ.

5 ಮಾಯೆಯನ್ನು ನಿತ್ಯವೆಂದಂಗೀಕರಿಸದಿದ್ದರೆ 1) ಈಶ್ವರನು ಈಶ್ವರನಲ್ಲವೆಂಬ ಪ್ರಸಂಗ ಉಂಟಾಗುವದೆಂದೂ, 2) ಸಂಸಾರವು ನಿರ್ನಿ ಮಿತ್ತವಾಗಿ ಪ್ರಾಪ್ತವಾಗುವದೆಂದೂ ; 3) ಬಂಧ ಮೋಕ್ಷಗಳಿಲ್ಲವೆಂದಾಗಿ ಶಾಸ್ತ್ರಾನರ್ಥಕ್ಯವೆಂಬೀ ಪ್ರಸಂಗ ಉಂಟಾಗುವದೆಂದೂ ಹಾಗಲ್ಲದೇ ಮಾಯೆಯು ನಿತ್ಯವೆಂದಾದರೆ ಇದೆಲ್ಲವೂ ಉಪಪನ್ನವಾಗುವವೆಂದೂ ಭಾಷ್ಯವು ಬೋಧಿ ಸುತ್ತದೆ. (ಗೀ: ಭಾ 13–19)

6 "ಸರ್ವೋಪೇತಾಚ ತದ್ದರ್ಶನಾತ್" ಎಂಬ ಸೂತ್ರ (ಬ್ರ: ಸೂ: 2-1-30) ರೀತ್ಯಾ ಭಾಷ್ಯವು ಬಗೆಬಗೆಯ ಶಕ್ತಿಗಳಿರುವದರಿಂದ ಬ್ರಹ್ಮದಿಂದಲೆ ಬಗೆಬಗೆಯ ವಿಕಾರ ಪ್ರಪಂಚವು ಉಂಟಾಯಿತೆಂದೂ ಬ್ರಹ್ಮವು ಎಲ್ಲಾ ವಿಧ ಶಕ್ತಿಗಳಿಂದ ಕೂಡಿರುವದೆಂದು ಒಪ್ಪಬೇಕೆಂದು ಬೋಧಿಸುತ್ತದೆ. "ಸರ್ವ ಕರ್ಮಗಳುಳ್ಳವನು, ಸರ್ವಕಾಮನು; ಸರ್ವಗಂಧನು, ಸರ್ವರಸನು, ಇದೆಲ್ಲ ವನ್ನು ವ್ಯಾಪಿಸಿ ಕೊಂಡಿರುವವನು, ವಾಗ್ರಹಿತನು, ಸಂಭ್ರಮರಹಿತನು; ಸತ್ಯ ಕಾಮನು; ಸತ್ಯ ಸಂಕಲ್ಪನು ॥ (ಛಾಂ 3-14-4. 8-7-1); "ಯಸ್ಸರ್ವಜ್ಞ ಸರ್ವವಿತ್" (ಮುಂ 1-1-9), "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾ ಚಂದ್ರಮ ಸಾವಿಧೃತೌ ತಿಷ್ಠತಃ" (ಬೃ: ಉ 3-8 9) ಈ ಶ್ರುತಿಗಳೆಲ್ಲವು ಪರಮಾತ್ಮನು ಅನೇಕ ವಿಧವಾದ ಶಕ್ತಿಗಳುಳ್ಳವ ನೆಂದು ತಿಳಿಸಿ ಕೊಡುತ್ತವೆ.

7 "ಆರಾಸಂಭ ವಸ್ತು ಸತೋ ನುಪಪತ್ತೇಃ" (ಬ್ರ: ಸೂ 2-3-9) ಎಂಬ ಸೂತ್ರ ರೀತ್ಯಾ ಭಾಷ್ಯವು ಮೂಲ ಪ್ರಕೃತಿಯನ್ನು ನಿತ್ಯವೆಂದಂಗೀಕರಿಸ ದಿದ್ದರೆ ಅನವಸ್ಥಾ ಪ್ರಸಂಗ ಉಂಟಾಗುವದೆಂದೂ ಮತ್ತು ಯಾವದನ್ನು ಮೂಲ ಪ್ರಕೃತಿ ಎಂದು ಒಪ್ಪುತ್ತೇವೆಯೋ ಅದು ನಮ್ಮ ಮತದಲ್ಲಿ ಬ್ರಹ್ಮ ಸ್ವರೂಪವೇ ಯಾಗಿರುತ್ತದೆ. ಆದರಿಂದ ಯಾವ ವಿರೋಧವೂ ಇಲ್ಲವೆಂದೂ ಬೋಧಿಸುತ್ತದೆ.

8 "ಸ್ಥಿತ್ಯದನಾಭ್ಯಾಂಚ" ಎಂಬ ಸೂತ್ರ ರೀತ್ಯಾ (ಬ್ರ ಸೂ 1-3-7). ಭಾಷ್ಯವು ಈಶ್ವರನು ಲೋಕದಲ್ಲಿ ಅಪ್ರಸಿದ್ಧನಾದ್ದರಿಂದ ಶ್ರುತಿಯ ತಾತ್ಪರ್ಯದಿಂದಲೇ ಆವನನ್ನು ತಿಳಿಯಬೇಕು. ಈಶ್ವರನನ್ನು ಆಕಸ್ಮಿಕವಾಗಿ ಕಲ್ಪಿಸಿ ಹೇಳುವದು ಯುಕ್ತವಲ್ಲವೆಂದು ಬೋಧಿಸುತ್ತದೆ

9 ಯಾವ ಈಶ್ವರ ಶಕ್ತಿಯಿಂದ ಭಕ್ತಾನುಗ್ರಹವನ್ನು ಮಾಡುವ ಪ್ರಯೋಜನಕ್ಕಾಗಿ ಪರಮೇಶ್ವರನು ಪ್ರವರ್ತಿಸುವನೋ ಆ ಶಕ್ತಿಯು ಬ್ರಹ್ಮಸ್ವರೂಪವೇ. ಅದು ತಾನೇ. ಶಕ್ತಿ ಶಕ್ತರಿಗೆ ಭೇದವಿಲ್ಲವೆಂದು (ಶಕ್ತಿಶಕ್ತಿಮತೋಃ ಅನನ್ಯತ್ವಾತ್॥ ಎಂದು (ಭಾಷ್ಯಗೀ: ಭಾ: ಅ 14-27) ಭಾಷ ವು ಬೋಧಿಸುತ ದೆ.

10 ಪರಮಾತ್ಮನು ಸರ್ವಜ್ಞನೂ ಸರ್ವಶಕ್ತನೂ ಆದ ಪರಮೇಶ್ವರನು ಎಂದು ತಿಳಿಸಿಕೊಡಲು ಗೀತೆಯಲ್ಲಿ ಹೇಳಿರುವ ವಿಭೂತಿಯೋಗವೆಂಬ ದಶಮೋಽಧ್ಯಾಯವು. ಮತ್ತು ವಿಶ್ವರೂಪ ಸಂದರ್ಶನವೆಂಬ ಏಕಾದಶೋಽಧ್ಯಾಯವು ಇವೆರಡು ಸಾಕಷ್ಟು ಪ್ರಮಾಣವಾಗಿಲ್ಲವೇ ? ಸರ್ವಜ್ಞತ್ವಾದಿಗಳನ್ನು ಭಾಷ್ಯವು ಹೇಳಿದ್ದರೆ ಅದನ್ನು ತಿರಸ್ಕರಿಸುವದು ಯಾವ ನ್ಯಾಯ ? ಅದು ಆಗಂತುಕ ಧರ್ಮವೆಂದು ಹೇಳಿದ ಮಾತ್ರದಿಂದ ಅದು ಸಿದ್ಧಿಸುವದು ಹೇಗೆ ? ಅದು ಬ್ರಹ್ಮಸ್ವರೂಪವಾಗಿರುವಾಗ ಅದು ಇಲ್ಲದ್ದಾಗುವದು ಹೇಗೆ ? ಇದನ್ನು ಕಲ್ಪಿಸುವದು ಎಂತೂ ಸುತರಾಂ ಸಾಧ್ಯವಿಲ್ಲದ್ದು, ಇದು ಭಾಷ್ಯ ಸಿದ್ಧಾಂತವನ್ನು ಛಿದ್ರಿಸಿ ಸ್ವಪಕ್ಷವನ್ನು ಸಾಧಿಸಲು ಮಾಡಿರುವ ಶ್ರುತ ಹಾನ್ಯ ಶ್ರುತ ಕಲ್ಪನಾ ಎಂಬುದು ಸ್ಪಷ್ಟವಾಗಿಲ್ಲವೆ ? ಶಕ್ತಿ, ಅವಿದ್ಯೆ ಇವು ಪರ್ಯಾಯ ಪದಗಳೇ ? ಹಾಗಿದ್ದರೆ ಪರಮಾತ್ಮನೆಂದರೆ ಅವಿದ್ಯೆಯುಳ್ಳವನೆಂದರೆ ಗತಿ ಏನು ?.

11 ವ್ಯಾಖ್ಯಾನವು ಇಷ್ಟೊಂದು ಪ್ರಮಾಣಗಳನ್ನು ತೃಣೀಕರಿಸಿ ಭಾಷ್ಯಕಾರರನ್ನು ಕಡೆಗಣಿಸಿ ಶ್ರುತಿಗಳನ್ನೂ ಸ್ಮೃತಿಗಳನ್ನೂ, ಸೂತ್ರಗಳನ್ನೂ ತತ್ಸಂಬಂಧ ಭಾಷ್ಯವನ್ನೂ ತಿರಸ್ಕರಿಸಿ ಸ್ವೇಚ್ಛೆಯಾಗಿ ಸ್ವಪಕ್ಷವನ್ನು ಸಾಧಿಸುವ ಮುಖ್ಯೋದ್ದೇಶದಿಂದ ತನ್ನ ಪೂರ್ವ ಪಕ್ಷವನ್ನೇ ಶಂಕರ ಗುರು ಭಾಷ್ಯ ಸಿದ್ಧಾಂತವೆಂದು ನಿರೂಪಿಸುತ್ತಾ ಜಗತ್ತು ಅವಿದ್ಯೆಯ ಪರಿಣಾಮವೆಂದು ಹೇಳುತ್ತಾ ಜಗನ್ಮಿಥ್ಯಾವಾದವನ್ನು ಮುಂದೊಡ್ಡಿ ಸಮರ್ಥಿಸಲು ಸೌಕರ್ಯವನ್ನುಂಟುಮಾಡಿಕೊಳ್ಳುತ್ತಾ ಮಾಯಾ ಅವಿದ್ಯೆಗಳು ಪರ್ಯಾಯ ಪದಗಳೆಂದು ನಿರೂಪಿಸುತ್ತದೆ.

12 "ವಿವಕ್ಷಿತ ಗುಣೋಪ ಪತ್ತೇಶ್ಚ" ಎಂಬ ಸೂತ್ರ ರೀತ್ಯಾ (ಬ್ರ: ಸೂ. 1-2-2). ಭಾಷ್ಯವು ಪರಮಾತ್ಮನೇ ಸೃಷ್ಟಿಕರ್ತನೆಂದೂ ಜಗತ್ತಿನ ಸೃಷ್ಟಿ ಸ್ಥಿತಿಲಯಗಳು ಅಪ್ರತಿಬದ್ಧ ಶಕ್ತನಾದ ಕೇವಲ ಈಶ್ವರನ ಅಧೀನವೆಂದು ಬೋಧಿಸುತ್ತದೆ ಆದರೆ ವ್ಯಾಖ್ಯಾನವು ಜಗತ್ತು ಅವಿದ್ಯಾಕಲ್ಪಿತ ವೆಂದೂ ಜ್ಞಾನಬಾಧ್ಯವೆದೂ ಕಲ್ಪಿಸಿ ಹೇಳಿದ ಮಾತ್ರಕ್ಕೆ ಅದು ಅವಿದ್ಯೆಯಿಂದ

ಕಲ್ಪಿಸಲ್ಪಡುವುದು ಹೇಗೆ ? ಜ್ಞಾನದಿಂದ ಜಗವನ್ನು ತೊಲಗಿಸುವದು ಹೇಗೆ ? ಇವೆರಡೂ ಅಶಕ್ಯ ವಿಷಯಗಳೆನಿಸುವವು ಜಾಗ್ರತ್ ಪ್ರಪಂಚವು ಪರಮೇಶ್ವರ ನಿಂದ ಸೃಷ್ಟಿಯಾಗಿರುವುದರಿಂದ ಅದರ ಸ್ಥಿತಿ ಪ್ರಲಯಗಳು ಕೂಡಾ ಈಶ್ವರಾಧೀನವಾಗಿರುತ್ತವೆ. ಒಬ್ಬನ ಆತ್ಮಜ್ಞಾನದಿಂದ ಅದು ನಾಶವಾಗತಕ್ಕದ್ದಲ್ಲ. ಸೃಷ್ಟಿಯ ವಿಪರೀತ ಕ್ರಮದಲ್ಲಿ ಜಗತ್ತು ಲಯವಾಗಬೇಕಾಗಿ ಅದು ಈಶ್ವರಾಧೀನವಾಗಿರುತ್ತದೆ. ಅದು ಅವಿದ್ಯಾಕಲ್ಪಿತವಲ್ಲ. ಭ್ರಾಂತಿ ಜನ್ಯವಲ್ಲ. ಹಾಗಿದ್ದರೆ ಜ್ಞಾನದಿಂದ ನಾಶವಾಗುತ್ತಿತ್ತು. ಹಾಗಲ್ಲ, ಈಶ್ವರ ಸೃಷ್ಟಿಯದು. ಜ್ಞಾನವು ಯಾವ ಪದಾರ್ಥವನ್ನು ನಾಶಮಾಡುವುವದಿಲ್ಲ. ಜ್ಞಾನದಿಂದ ನಾಶವಾಗುವದು ಅಜ್ಞಾನ ಒಂದೇ ; ಯಾವ ವಸ್ತುವು ನಾಶವಾಗುವದಿಲ್ಲ.

ಮತ್ತು ಭಾಷ್ಯವು "ನಸ್ವಪ್ನಾದಿವತ್ ವೈಧರ್ಮ್ಯಾಚ್ಚ" ಎಂಬ ಸೂತ್ರ ರೀತ್ಯಾ (ಬ್ರ: ಸೂ. 2-2-29) ಸ್ವಪ್ನಾದಿಪ್ರತ್ಯಯಗಳಂತೆ ಎಚ್ಚರದ ಪ್ರತ್ಯಯಗಳಾಗಿರುವದಿಲ್ಲ. ಏಕೆಂದರೆ, ಸ್ವಪ್ನ ಜಾಗ್ರತಗಳಿಗೆ ವೈಧರ್ಮ್ಯ ವಿರುವದು. ಸ್ವಪ್ನವು ಸ್ಮೃತಿ ಮಾತ್ರವು. ಆದರೆ ಜಾಗ್ರತೆಯಲ್ಲಿ ಕಂಡದ್ದು ಅನುಭವವಾಗಿರುತ್ತದೆ. ಇವೆರಡಕ್ಕಿರುವ ಭೇದವು ತನಗೆ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುತ್ತಿರುವಾಗ ಎರಡಕ್ಕೂ ಸಾಮ್ಯವನ್ನು ಹೇಳುವದು ಯುಕ್ತವಲ್ಲ. ಪ್ರಾಜ್ಞರೆನಿಸಿಕೊಂಡವರು ತಮ್ಮ ಅನುಭವವನ್ನೇ ಅಲ್ಲಗಳೆಯುವದು ಯುಕ್ತವೊ ಅಲ್ಲ, ಮತ್ತು ಎಚ್ಚರದಲ್ಲಿ ಕಂಡುಬರುವ ಕಂಬವೇ ಮುಂತಾದ ವಸ್ತುಗಳು ಯಾವ ಅವಸ್ಥೆಯಲ್ಲಿಯೂ ಬಾಧಿತವಾಗುವದಿಲ್ಲ ಏಕೆಂದರೆ ಸ್ವಪ್ನ ಜಾಗ್ರತೆಗಳಿಗೆ ಇರುವ ವೈಧರ್ಮ್ಯವನ್ನು ಮೇಲೆಯೇ ತೋರಿಸಲಾಗಿದೆ ಆದರಿಂದ ಸ್ಪಷ್ಟವಾಗಿ ಜಾಗ್ರತ್ ಪ್ರಪಂಚವು ಜ್ಞಾನಬಾಧ್ಯವಲ್ಲವೆಂದು ಬೋಧಿಸುತ್ತದೆ. ಹೀಗಿರುವಾಗ ವ್ಯಾಖ್ಯಾನವು ಜಗತ್ತು ಅವಿದ್ಯಾಕಲ್ಪಿತವೇದೂ ಜ್ಞಾನಬಾಧ್ಯವೆಂದೂ ಸ್ವಪಕ್ಷ ಸಾಧನೆಗಾಗಿ ಮಾಡಿರುವ ಶ್ರುತಹಾನ್ಯ ಶ್ರುತಕಲ್ಪನೆ ಎಂಬುದು ಸ್ಪಷ್ಟವು. ಜಗತ್ತು ಮಿಥ್ಯಾ ಭೂತವೂ ಅಲ್ಲ ವ್ಯಾಖ್ಯಾನಕಾರನ ಜಗನ್ಮಿಥ್ಯಾ ವಾದವು ಶ್ರುತಿ ಭಾಷ್ಯ ವಿರುದ್ಧವು. ಸಮಂಜಸವಲ್ಲ ॥

ಮತ್ತು "ಏವಂ ಚ ಸತಿ ಸರ್ವ ಪ್ರಪಂಚೋಪಶಮೇ ಅದ್ವೈತ ಸಿದ್ಧಿಃ" ಎಂಬ ಭಾಷ್ಯವು. (ಮಾಂ: ಉಪ. ಮಂ: 3) "ಆತ್ಮನು ನಾಲ್ಕು ಪಾದಗಳುಳ್ಳವನೆಂದು ಶ್ರುತಿ ಕಲ್ಪಿಸಿದೆ" ಎಂದು ಬೋಧಿಸುತ್ತದೆ. ಮೂರವಸ್ಥೆಗಳು ಮೂರು ಪಾದಗಳು, ತುರ್ಯವು ನಾಲ್ಕನೆಯ ಪಾದವೆಂದು ತಿಳಿಯಬಹುದು ಹೀಗಾದರೆ ಪ್ರಪಂಚವೆಲ್ಲ ಪ್ರಲಯವಾದರೆ ಅದ್ವೈತವು ಸಿದ್ಧಿಸುವದು. ಸರ್ವ ಭೂತಗಳಲ್ಲಿರುವ ಆತ್ಮನು ಒಬ್ಬನೇ ಎಂದೂ. ಸರ್ವ ಭೂತಗಳನ್ನು ಆತ್ಮನಲ್ಲಿ ತಿಳಿದಂತೆಯೂ ಆಗುತ್ತದೆ. ಆದರಿಂದ ಪ್ರಪಂಚಲಯವೆಂದರೆ ಏನು ? ಎಂಬುದನ್ನು ಭಾಷ್ಯವು ಬೋಧಿಸಿರುವದು ಹೇಗೆಂದರೆ —

"ದರ್ಶನಾಚ್ಚ" ಎಂಬ ಸೂತ್ರ ರೀತ್ಯಾ (ಬ್ರ: ಸೂ. 3-2-21) ಭಾಷ್ಯವು 'ಪ್ರಪಂಚ ವಿಲಯವೆಂದರೆ ಯಾವುದು' ? ಎಂದು ಪ್ರಶ್ನಿಸಿ ಮೊದಲನೆಯದಾಗಿ ನಮಗೆ ಕಂಡು ಬರುವ ಪೃಥಿ ವ್ಯಾದಿರೂಪ ಬಾಹ್ಯ ಪ್ರಪಂಚವನ್ನು ಮತ್ತು ದೇಹಾದಿ ರೂಪವಾದ ಆಧ್ಯಾತ್ಮಿಕ ಪ್ರಪಂಚವನ್ನು ಪ್ರವಿಲಯ ಮಾಡಿಕೊಳ್ಳ ಬೇಕೆಂದರೆ ಅದನ್ನು ಪುರುಷ ಮಾತ್ರನಾದ ಯಾವನು ಪ್ರವಿಲಯ ಮಾಡಲಾರನು ಆದರಿಂದ ಅದು ಅಶಕ್ಯ ವಿಷಯವೆಂದಾಗುವದು. ಅಷ್ಟೇ ಅಲ್ಲ ಇದಕ್ಕೂ ಮೊದಲು ಮುಕ್ತನಾದವನು ಪೃಥಿ ವ್ಯಾದಿ ರೂಪ ಪ್ರಪಂಚವನ್ನು ಪ್ರವಿಲಯ ಮಾಡಿಕೊಂಡಿರುತ್ತಾನೆ ಆದರಿಂದ ಈ ಜಗತ್ತು ಪೃಥಿವ್ಯಾದಿ ರಹಿತವಾಗಿಯೇ ಇರಬೇಕಾಗಿತ್ತು ಆದರೆ ಹೀಗಲ್ಲ ಅದರಿಂದ ಬ್ರಹ್ಮದಲ್ಲಿ ಅವಿದ್ಯಾ ಧ್ಯಸ್ತವಾದ ಪ್ರಪಂಚವನ್ನು ಅಲ್ಲಗಳೆದು "ಏಕೋ ದ್ವಿತೀಯನಾದ ಬ್ರಹ್ಮವು ನೀನೆ, ಅದೇ ಸತ್ಯವು ಅದೇ ಆತ್ಮನು. ಅದೇ ನೀನಾಗಿರುವೆ" ಎಂದು ಬೋಧಿಸಿದರೆ ಆ ಜ್ಞಾನ ಉಂಟಾಗುತ್ತದೆ ಆ ಜ್ಞಾನವು ತಾನೇ ಬಾಧಿತವಾಗುತ್ತದೆ ಅದರಿಂದ ಅಧ್ಯಸ್ತವಾದ ನಾಮ ರೂಪ ಗಳು ತಾನೇ ಪ್ರವಿಲಯವಾಗುತ್ತದೆಂದು ಬೋಧಿಸಿರುವದು. ಈಶ್ವರನು ಸೃಷ್ಟಿಸಿರುವ ಪ್ರಪಂಚವು ಜ್ಞಾನ ಬಾಧ್ಯವಲ್ಲ. ಈಶ್ವರನೇ ಅದನ್ನು ನಿಯತ ಕಾಲಾನಂತರ ಪ್ರವಿಲಯ ಮಾಡುವನು. ವ್ಯಾಖ್ಯಾನವು ಜಗತ್ತು ಜ್ಞಾನಬಾಧ್ಯವೆಂಬುದು ಸ್ವಪಕ್ಷ ಸಾಧನೆಗಾಗಿ ಮಾಡಿರುವ ಶ್ರುತಹಾನ್ಯಶ್ರುತ ಕಲ್ಪನೆ ಎಂಬುದು ಸ್ಪಷ್ಟವು

13 "ಯಥಾ ಚ ಪ್ರಾಣಾದಿ" ಎಂಬ ಸೂತ್ರ ರೀತ್ಯಾ (ಬ್ರ: ಸೂ: 2– –20) ಭಾಷ್ಯವು ಕಾರ್ಯ ಕಾರಣಗಳನನ್ಯವೆಂದೂ, ಸಮಸ್ತ ಜಗತ್ತು ಬ್ರಹ್ಮದ ಕಾರ್ಯವೆಂದೂ, ಜಗತ್ತು ಬ್ರಹ್ಮಕ್ಕೆ ಭಿನ್ನವಲ್ಲವೆಂದೂ ಸಮರ್ಥಿಸಿ "ಯಾವ ಆದೇಶದಿಂದ ಕೇಳದೇ ಇದ್ದದ್ದು ಕೇಳಿದ್ದಾಗುವದೋ, ಮನನ ಮಾಡದೇ ಇದ್ದದ್ದು ಮನನ ಮಾಡಿದ್ದಾಗುವದೋ, ಅರಿಯದೇ ಇದ್ದದ್ದು ಅರಿತದ್ದಾಗುವದೋ" ಎಂಬ ಶ್ರುತಿ ಪ್ರತಿಜ್ಞೆಯು (ಛಾಂ ಉ: 6–1–3) ಸಿದ್ಧಿಸುವದೆಂದು ಬೋಧಿಸಿರುವ ಭಾಷ್ಯವನ್ನು ಧಿಕ್ಕರಿಸಿ ಜಗತ್ತು ಬ್ರಹ್ಮ ಇವೆರಡಕ್ಕಿರುವ ಕಾರ್ಯಕಾರಣ ಭಾವವನ್ನೇ ತಿರಸ್ಕರಿಸಿ, ಶ್ರುತಿ ಪ್ರತಿಜ್ಞಾ ಭಂಗವನ್ನುಂಟುಮಾಡಿ ಜಗತ್ತು ಅವಿದ್ಯಾ ಕಲ್ಪಿತವೆಂದೂ ಜ್ಞಾನ ಬಾಧ್ಯವೆಂದೂ ಕಲ್ಪಿಸಿ ಇದೇ ಶಂಕರ ಸಿದ್ಧಾಂತವೆಂದೂ ಹೇಳುವದು ವ್ಯಾಖ್ಯಾನಕಾರನು ಮಹಾ ಪಂಡಿತನಾಗಿರುವಾಗ ಇದು ಆತನ ಸದುದ್ದೇಶವೆಂದು ತಿಳಿಯುವದು ಹೇಗೆ ? ಇದು ಗುರು ಭಾಷ್ಯದ ವ್ಯಾಖ್ಯಾನವೇ ? ಇದು ಶ್ರುತಹಾನ್ಯಶ್ರುತಕಲ್ಪನಾ ಎಂದಾಗಿಲ್ಲವೇ ? ಜಗನ್ಮಿಥ್ಯಾ ವಾದವು ಶ್ರುತಿ ಭಾಷ್ಯ ವಿರುದ್ಧವು. ಸಮಂಜಸವಲ್ಲ ॥

14 "ಸತ್ತ್ವಾಚ್ಚಾವರಸ್ಯ" ಎಂಬ ಸೂತ್ರ ರೀತ್ಯಾ (ಬ್ರ: ಸೂ: 2–1–16) ಭಾಷ್ಯವು ಯಾವದು ಯಾವದರ ರೂಪದಿಂದ ಯಾವದರಲ್ಲಿರುವದಿಲ್ಲವೋ ಅದು ಅದರಿಂದ ಹುಟ್ಟುವದಿಲ್ಲ. ಮರಳಿನಿಂದ ಎಣ್ಣೆಯು ಬರುವದಿಲ್ಲವೆಂಬಂತೆ ಹುಟ್ಟುವದಕ್ಕಿಂತ ಮುಂಚೆ ಕಾರ್ಯವು ಕಾರಣಕ್ಕೆ ಅನನ್ಯವಾಗಿರುತ್ತದೆ ಆದರಿಂದ ಕಾರ್ಯವು ಹುಟ್ಟಿದ ಮೇಲೂ ಕಾರಣಕ್ಕೆ ಅನನ್ಯವೆಂದೇ ನಿಶ್ಚಯವಾಗುತ್ತದೆ ಆದರಿಂದ ಕಾರಣವಾದ ಬ್ರಹ್ಮವು ಹೇಗೆ ಮೂರು ಕಾಲಗಳಲ್ಲಿಯೂ ಸತ್ತ್ವವನ್ನು ಬಿಟ್ಟಿರುವದಿಲ್ಲವೋ ಹಾಗೆಯೆ ಕಾರ್ಯವಾದ ಜಗತ್ತು ಮೂರು ಕಾಲಗಳಲ್ಲಿಯೂ ಸತ್ತ್ವವನ್ನು ಬಿಟ್ಟಿರುವದಿಲ್ಲ ಆದರೆ ಸತ್ತ್ವವು ಒಂದೇ ಇದರಿಂದಲೂ ಕಾರಣಕ್ಕೆ ಕಾರ್ಯವು ಅನನ್ಯವು, ವ್ಯಾಖ್ಯಾನಕಾರನು ಈ ಸೂತ್ರವನ್ನೂ ಆದರ ಭಾಷ್ಯವನ್ನು ನೋಡಿಲ್ಲವೆನ್ನಬಹುದೇ ? ಆ ಮಹಾ ವಿದ್ವಾಂಸನಿಗೆ ಅದು ಅರ್ಥವಾಗಲಿಲ್ಲವೆನ್ನಬಹುದೇ ? ಇನ್ನು ಏನನ್ನಬಹುದು ? ಜಗತ್ತು ಅವಿದ್ಯಾ ಕಲ್ಪಿತವೆಂದೂ ಜ್ಞಾನ ಬಾಧ್ಯವೆಂದೂ

ಹೊಂಪವ ಸಲ್ಲದ ಕಲ್ಪನೆಯನ್ನು ಮಾಡಿ ಗುರು ಭಾಷ್ಯವನ್ನು ಛಿದ್ರಿಸಿ ಸ್ವಪಕ್ಷ ವನ್ನು ಸಾಧಿಸಲು ಮಾಡಿರುವ ಯತ್ನವಾಗಿರುವದೆಂದು ತಿಳಿದರೆ ದೋಷವಾಗು ವದೇ ? ಎಷ್ಟು ಅನ್ಯಾಯವಿದು ? ಭಾಷ್ಯ ವಿರುದ್ಧವಾಗಿ ತತ್ತ್ವವನ್ನು ನಿರೂಪಿಸಿ ಈ ತತ್ತ್ವ ವ್ಯಾಖ್ಯಾನವು ಭಾಷ್ಯ ಸಮ್ಮತವೆಂದು ಇದುವೇ ಶಂಕರ ಸಿದ್ಧಾಂತವೆಂದು ಹೇಳುವದು ಎಷ್ಟು ಸಾಹಸದ ಮಾತು ?

15 "ಯುಕ್ತೇಃ ಶಬ್ದಾಂತ ರಾಚ್ಚ" ಎಂಬ ಸೂತ್ರದ ರೀತ್ಯಾ (ಬ್ರ: ಸೂ. 2-1-18) ಭಾಷ್ಯವು ಅಸತ್ಕಾರ್ಯ ವಾದವನ್ನು ಖಂಡಿಸಿ ಸತ್ಕಾರ್ಯ ವಾದವೇ ಶ್ರುತಿ ಸಮ್ಮತವೆಂದು ಸಾಧಿಸಿ ಪರಮಾತ್ಮನು ಸರ್ವಜ್ಞ ಸರ್ವ ಶಕ್ತನಾದ್ದರಿಂದ ಬ್ರಹ್ಮವೇ ಜಗತ್ಕಾರಣವೆಂದು ಜಗತ್ತು ಬ್ರಹ್ಮದ ಕಾರ್ಯವೇ ಎಂದೂ ಸಮರ್ಥಿಸಿ ಕಾರ್ಯ ಕಾರಣಗಳು ಅನನ್ಯವೆಂಬ ನ್ಯಾಯ ದಿಂದ ಬ್ರಹ್ಮ ಜಗತ್ತುಗಳಿಗೆ ಏಕತ್ವವನ್ನು ಸಾಧಿಸಿ ಜಗತ್ತೂ ಬ್ರಹ್ಮ ಸ್ವರೂಪವೇ ಎಂದು ಬೋಧಿಸಿರುತ್ತದೆ.

ಆದರೆ ವ್ಯಾಖ್ಯಾನವು ಇದೆಲ್ಲವನ್ನು ತಿರಸ್ಕರಿಸಿ ಗುರುನಾಥನ ಭಾಷ್ಯವನ್ನು ಧಿಕ್ಕರಿಸಿ ಭಾಷ್ಯ ಸಿದ್ಧಾಂತವನ್ನು ಛಿದ್ರಿಸಿ ಜಗತ್ತು ಅವಿದ್ಯಾ ಕಲ್ಪಿತವೆಂದೂ ಜ್ಞಾನ ಬಾಧ್ಯವೆಂದೂ ಕಲ್ಪಿಸಿ ನಿರೂಪಿಸುತ್ತದೆ

ಈ ರೀತಿಯಲ್ಲಿ ವ್ಯಾಖ್ಯಾನ ಸಿದ್ಧಾಂತವು ಬ್ರಹ್ಮವು ಸರ್ವಜ್ಞ ಸರ್ವ ಶಕ್ತನಲ್ಲವೆಂದೂ ಸರ್ವಜ್ಞತ್ವವು ಆಗಂತುಕ ಧರ್ಮವೆಂದೂ, ಶಕ್ತಿ ಎಂದರೆ ಅವಿದ್ಯೆ ಎಂದೂ ಹೇಳಿ ಬ್ರಹ್ಮದ ಜಗತ್ಕಾರಣತ್ವವನ್ನು ನಿರಾಕರಿಸಿ ಬ್ರಹ್ಮ ಸ್ವರೂಪವನ್ನು ವಿರೂಪಗೊಳಿಸಿ, ಈಶ್ವರನು ಅವಿದ್ಯಾ ಕಲ್ಪಿತವೆಂದು ಹೇಳಿ ಈಶ್ವರನಿಲ್ಲವೆಂದು ಮಾಡಿ ಜಗತ್ತು ಅತ್ಯಂತಾ ಭಾವವೆಂದೂ ಅವಿದ್ಯಾ ಕಲ್ಪಿತ ವೆಂದೂ ಜ್ಞಾನ ಬಾಧ್ಯವೆಂದೂ, ಜಗತ್ತು ಆದರಿಂದ ಮಿಥ್ಯಾ ಭೂತವೆಂದೂ ಸಾಧಿಸಿ, ಕಳೆದುಳಿದ ಜೀವನನ್ನೇ ಬ್ರಹ್ಮವೆಂದು ಹೇಳಿ ಅವನು ಬೇರೆ ಅಲ್ಲವೆಂದು ನಿರೂಪಿಸುತ್ತಾ "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೊ ಬ್ರಹ್ಮೈವ ನಾ ಪರಃ" ॥ ಎಂದು ಇದೇ ಶಂಕರ ಸಿದ್ಧಾಂತವೆಂದೂ, ಇದೇ ಅದ್ವೈತ ಸಿದ್ಧಾಂತವೆಂದೂ ನಿಶ್ಚಯಿಸಿ ಹೇಳಿರುವದು. ಇದೇ ಈಗಲೂ ರೂಢಿಯಲ್ಲಿರುವದು ಆದರೆ

ಇದು ಶ್ರುತಿ ಭಾಷ್ಯ ವಿರುದ್ಧವು. ಇದು ಶೂನ್ಯದಲ್ಲಿ ಪರ್ಯವಸಾನವಾಗಿರುವದು. ಹೇಗೆಂದರೆ.—

ವ್ಯಾಖ್ಯಾನ ಸಿದ್ಧಾಂತವು ಮಾಯಾ ಅವಿದ್ಯೆಗಳು ಪರ್ಯಾಯ ಪದಗಳೆಂದು ಕಲ್ಪಿಸಿರುವದರಿಂದ ಮಾಯೆಯು ಜ್ಞಾನ ಬಾಧ್ಯವೆಂದಾಗಿ ಪರಮಾತ್ಮನು ಅಶಕ್ತನೇದಾಗಿ ಸೃಷ್ಟಿಯ ಕಾರ್ಯದಲ್ಲಿ ತೊಡಗಲಾರನೆಂದಾಗಿ ಬ್ರಹ್ಮವು ಜಗತ್ಕಾರಣನಲ್ಲವೆಂದು ಸಿದ್ಧಾಂತವಾಯಿತು. ಇದರಿಂದ ಸೃಷ್ಟ್ಯಾದಿಗಳೇ ಇಲ್ಲವೆಂದೂ ಆಯಿತು. ಜಗತ್ತು ಅತ್ಯಂತಾ ಭಾವವೆಂದಾಯಿತು. ಜಗತ್ತು ಅಭಾವವೆಂದ ಮೇಲೆ ವಿಷಯಗಳೇ ಇಲ್ಲವೆಂದಾಗಿ ವ್ಯವಹಾರವೇ ಇಲ್ಲವೆಂದಾಗಿ ಭ್ರಾಂತಿಯೇ ಇಲ್ಲವೆಂದಾಗಿ ಬಂಧ ಮೋಕ್ಷಗಳೇ ಇಲ್ಲವೆಂದಾಗಿ, ಶಾಸ್ತ್ರಾನರ್ಥಕ್ಯಹೇದಾಗಿ ಏನೊಂದೂ ಇಲ್ಲವೆಂದಾಯಿತು. ಭೂತಗಳೂ ಇಲ್ಲ. ಜೀವರುಗಳೂ ಇಲ್ಲ. ಸೃಷ್ಟ್ಯಾದಿಗಳೇ ಇಲ್ಲವೆಂದೊಮ್ಮೆ ಹೇಳುವದು. ಆ ಈಶ್ವರನು ಮಾಯೆಯಿಂದ ಆಗಂತುಕವಾಗಿ ಸರ್ವಜ್ಞತ್ವಾದಿ ಧರ್ಮಗಳನ್ನು ಹೊಂದಿ ಸೃಷ್ಟ್ಯಾದಿಗಳನ್ನು ಮಾಡುವನೆಂದೂ ಅವನು ಅಪರ ಬ್ರಹ್ಮನೆನಿಸುವನೆಂದೂ, ಅವನು ಜ್ಞಾನದಿಂದ ನಾಶವಾಗತಕ್ಕವನೆಂದೂ ತಾನೇ ನಾಶವಾಗತಕ್ಕವನು ಈಶ್ವರನೆನಿಸುವದೆಂತೆಂದು ವಿವರಿಸದೇ ಇರುವಾಗ ಈ ಸಿದ್ಧಾಂತವನ್ನು ತಿಳಿಯುವ ಬಗೆ ಹೇಗ ? ಸೃಷ್ಟ್ಯಾದಿಗಳೇ ಇಲ್ಲವೆಂದ ಮೇಲೆ ಭೂತಗಳು ಇಲ್ಲವೆಂದಾಯಿತು. ಭೂತಗಳೇ ಇಲ್ಲವೆಂದ ಮೇಲೆ ಜೀವರುಗಳೂ ಇಲ್ಲ. ಜೀವರೇ ಇಲ್ಲವೆಂದ ಮೇಲೆ ಅನುಪ್ರವೇಶವೂ ಇಲ್ಲ. ಅವಿದ್ಯೆಯು ಇಲ್ಲ. ಸುಖ ದುಃಖಗಳು ಇಲ್ಲ. ಬಂಧ ಮೋಕ್ಷಗಳೂ ಇಲ್ಲ. ಏನೊಂದೂ ಇಲ್ಲವೆಂದಾಯಿತು. ಅದರಿಂದ ಶ್ರುತಿಗಳು, ಸ್ಮೃತಿಗಳು ಸೂತ್ರಗಳು ತತ್ಸಂಬಂಧ ಭಾಷ್ಯವು—ಇವೆಲ್ಲವೂ ವ್ಯರ್ಥವೆಂದಾಗಿ ಶೂನ್ಯದಲ್ಲಿ ಪರ್ಯವಸಾನವಾಗಿರುವದು ಜಗತ್ತು ಇಲ್ಲವೆಂದ ಮೇಲೆ ತನ್ನ ಶರೀರವೇ ಇಲ್ಲವೆಂದಾಗಿ ಇದು ಸ್ವಾನುಭವ ವಿರೋಧವಾಗಿ ಈ ವಾದವು ನಿರಾಧಾರವೆನಿಸಿರುವದು. ಇದು ಅದ್ವೈತ ಸಿದ್ಧಾಂತವೆನಿಸುವದೇ ? ಕೇವಲ ಹಾಸ್ಯಾಸ್ಪದವು. ॥

## — 13 ಭಾಷ್ಯ ರೀತ್ಯಾ ಶ್ರುತ್ಯುಕ್ತ ಅದ್ವೈತ ಸಿದ್ಧಾಂತವು —

## — ಬ್ರಹ್ಮ ಸ್ವರೂಪ ನಿರೂಪಣೆ —

1 ಶ್ರುತಿಗಳಿಗೆಲ್ಲಾ ಅದ್ವೈತದಲ್ಲಿಯೇ ತಾತ್ಪರ್ಯವೆಂಬುದನ್ನು ಮೇಲೆಯೇ ತಿಳಿಸಿದ್ದಾಯಿತು. ಈಗ ಅದ್ವೈತ ಶಬ್ದಾರ್ಥವೇನೆಂಬುದನ್ನು ವಿವರಿಸಲಾಗುವದು. ಅದ್ವೈತವೆಂದರೆ ದ್ವೈತವಲ್ಲವೆಂದರ್ಥ. ಸೃಷ್ಟಿಗೆ ಪೂರ್ವದಲ್ಲಿ ಸದ್ರೂಪನಾದ ಬ್ರಹ್ಮವು 'ಅದ್ವಿತೀಯಂ' ಎಂಬ ಶಬ್ದದಿಂದ ಎರಡನೆಯದನ್ನು ಸೂಚಿಸಿ ಎರಡನೆಯದೆನಿಸಿ ಅದಿಲ್ಲವೆಂದೂ ಅದರಿಂದ 'ಏಕ ಮೇವಾ ದ್ವಿತೀಯಂ' ಎಂದು ಬ್ರಹ್ಮವು ಒಂದೇ ಇತ್ತೆಂದು ಒತ್ತಿ ಹೇಳುತ್ತದೆ. (ಸದೇವ ಸಾಮ್ಯ ಇದಮಗ್ರ ಆಸೀತ್ ಏಕ ಮೇವಾ ದ್ವಿತೀಯಂ ॥ ಎಂದು ಶ್ರುತಿ. ಛಾಂ· ಉ. 6–2–1)

ಮತ್ತು 'ಇದಂ ಅಗ್ರ' ಎಂಬುದು ಇದಮೆಂದು ಕಾಣುವ ಜಗತ್ತನ್ನು ಸೃಷ್ಟಿಗೆ ಪೂರ್ವದಲ್ಲಿ ಸಮಾನಾಧಿಕರಣದಿಂದ ಬ್ರಹ್ಮನಲ್ಲಿ ನಾಮ ರೂಪಗಳನ್ನು ಬಿಟ್ಟು ಅವ್ಯಾಕೃತ ರೂಪದಿಂದ ಅವ್ಯಕ್ತವೆನಿಸಿ ಇತ್ತೆಂದು ಮುಂದೆ ತಿಳಿಸುತ್ತದೆ. (ತದ್ಧೆ ದಂ ತರ್ಹಿ ಅವ್ಯಾಕೃತ ಮಾಸೀತ್ ॥ ಎಂದು ಶ್ರುತಿ ಬೃ: ಉ· 1–4–7)

ಅದರಿಂದ ಸೃಷ್ಟಿಗೆ ಪೂರ್ವದಲ್ಲಿ ಸದ್ರೂಪನಾದ ಪರಮಾತ್ಮನು ಒಬ್ಬನೇ ಇದ್ದನೆಂದೂ ಅವನಿಗೆ ಭಿನ್ನವಾಗಿ ಯಾವದೊಂದೂ ಇರಲಿಲ್ಲವೆಂದೂ ಹೇಳುವದು ಯುಕ್ತವು. ಆದರೆ ವ್ಯಾಖ್ಯಾನವು ಬ್ರಹ್ಮವು ಒಬ್ಬನೇ ಇದ್ದನೆಂದೂ ಹೇಳಿ ಇನ್ನಾದದೂ ಇರಲಿಲ್ಲವೆಂದು ವ್ಯಾಖ್ಯಾನ ಮಾಡಿ ಹೇಳಿರುವದು ಯುಕ್ತವೆನಿಸುವದಿಲ್ಲ. ಏಕೆಂದರೆ ಅದು ಶ್ರುತಿ ವಿರುದ್ಧವು. ಭಾಷ್ಯ ವಿರುದ್ಧವು.

ಶಂ:—"ಅಶಬ್ದ ಮಸ್ಪರ್ಶ ಮರೂಪ ಮವ್ಯಯಂ" ಎಂಬ ಶ್ರುತಿ (ಕಠ: ಉ: 1–3–15) ಬ್ರಹ್ಮವು ನಿರ್ವಿಶೇಷವೆಂದು ಬೋಧಿಸುತ್ತಿರುವದರಿಂದ ಆ ನಿರ್ವಿಶೇಷ ಶ್ರುತಿಗೆ ವಿರುದ್ಧವಾಗುವದಲ್ಲ, !

ಸಮಾ: ಜಗತ್ತು ನಾಮ ರೂಪಗಳಿಂದ ಇತ್ತೆಂದು ಹೇಳಿದ್ದರೆ ಅದು ಆಗ ಶ್ರುತಿ ವಿರೋಧವೆಂದು ಆಗುತ್ತಿತ್ತು. ಹಾಗಲ್ಲ. ಜಗತ್ತು ಬೀಜ ಶಕ್ತಿ ರೂಪದಿಂದ ಬ್ರಹ್ಮಕ್ಕೆ ಅನನ್ಯವಾಗಿ ಶಕ್ತಿ ಶಕ್ತನಿಗೆ ಅನನ್ಯವಾಗಿರುವಂತೆ ಬ್ರಹ್ಮಾಭಿನ್ನವಾಗಿ ಅವ್ಯಕ್ತವಾಗಿತ್ತೆಂದು ಭಾಷ್ಯವು ಹೇಳಿರುವದರಿಂದ ಸಿದ್ಧಾಂತ ಹಾನಿ ಇಲ್ಲವೆಂದರಿಯಬೇಕು ಅವ್ಯಕ್ತವಾಗಿತ್ತೆಂದು ಹೇಳಿರುವದರಿಂದ ಸಿದ್ಧಾಂತ ಹಾನಿ ಯಾಗುವದೆಂತು? ಅದರಿಂದ ಬ್ರಹ್ಮವು ಏಕೋದ್ವಿತೀಯನೆಂದು ನಿಶ್ಚಯವಾಗುತ್ತದೆ

2 ಈಗ ಅದ್ವೈತ ಶಬ್ದಾರ್ಥವಿಂದ ಜಗತ್ತೆಲ್ಲವು ಬ್ರಹ್ಮನಲ್ಲಿ ಅವ್ಯಕ್ತವಾಗಿ ಬ್ರಹ್ಮಾಭಿನ್ನವಾಗ ಸೃಷ್ಟಿಗೆ ಪೂರ್ವದಿಂದಲೂ ಇತ್ತೆಂದೂ ಆಯಿತು. ಹಾಗಯೇ ಬದ್ಧ ಜೀವರೆಲ್ಲರೂ ನಾಮ ರೂಪಗಳನ್ನು ಬಿಟ್ಟು ಪ್ರಲಯಕಾಲದಲ್ಲಿ ಜೀವರುಗಳ ಅವಿದ್ಯೆಯು ಮಾಯಾ ಕಾರ್ಯವಾದ್ದರಿಂದ ತನ್ನ ಕಾರಣವಾದ ಮಾಯಾ ಶಕ್ತಿಯಲ್ಲಿ ಸೇರಿ ಲಯವಾಗುವದು. ಇದರಿಂದ ಜೀವರುಗಳು ಬೇರೆ ಅಲ್ಲವೆಂದೂ ಬ್ರಹ್ಮಸ್ವರೂಪವೇ ಎಂದೂ ನಿಶ್ಚಯವಾಗುತ್ತದೆ.

ಶಂ:—ಬ್ರಹ್ಮನಲ್ಲಿ ಅವಿದ್ಯೆ ಇರುತ್ತದೆಂದು ಹೇಳುವ ವ್ಯಾಖ್ಯಾನವನ್ನು ಶ್ರುತಿ ಭಾಷ್ಯ ಸಮ್ಮತವಲ್ಲವೆಂದು ಖಂಡಿಸಿರುವದು ಹೇಗೆ ಸರಿ? ಎಂದರೆ

ಸಮಾಧಾನ —ಕೇಳಿ ಬ್ರಹ್ಮವು ಸತ್ಯ ಜ್ಞಾನಾನಂತ ಸ್ವರೂಪನೆಂದು ಶ್ರುತಿ ಭಾಷ್ಯಗಳು ಸಮರ್ಥಿಸುತ್ತವೆ ಜ್ಞಾನದಲ್ಲಿ ಅಜ್ಞಾನವಿಲ್ಲ ಅದರಿಂದ ಭಾಷ್ಯವೂ ಈಶ್ವರನಿಗೆ ಅವಿದ್ಯೆಯು ಯಾವಾಗಲೂ ಇಲ್ಲವೆಂದು ಹೇಳುತ್ತದೆ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳು ಸರ್ವಜ್ಞ ಸರ್ವ ಶಕ್ತನಾದ ಪರಮೇಶ್ವರಾಧೀನವು. ಮಾಯೆಯು ಪರಮಾತ್ಮನ ಪರಮಾದ್ಭುತ ಅನಿರ್ವಚನೀಯ ಅಪ್ರತಿಬದ್ಧ ಶಕ್ತಿ. ಪರಮಾತ್ಮ ನಿತ್ಯನಾದ್ದರಿಂದ ಅವನ ಶಕ್ತಿರೂಪ ಪ್ರಕೃತಿಯು ನಿತ್ಯವೆಂಬುದೇ ಯುಕ್ತವೂ ಎಂದು ಭಾಷ್ಯವು ಬೋಧಿಸುತ್ತದೆ ಮಾಯೆ ಅವಿದ್ಯೆಯು ಪರ್ಯಾಯ ಪದಗಳಲ್ಲ. ಅದರಿಂದ ಜೀವರುಗಳು ಪ್ರಲಯ ಕಾಲದಲ್ಲಿ ಪರಮಾತ್ಮನನ್ನು ಸೇರಿದಾಗ ಕಾರ್ಯವೆಲ್ಲವು (ಸೃಷ್ಟಿ ಎಲ್ಲವೂ) ಅದು ಅದರ ಕಾರಣದಲ್ಲಿ ಸೇರುತ್ತದೆ ಅದರಿಂದ ಪ್ರಲಯ ಕಾಲದಲ್ಲಿ ಎಲ್ಲವೂ ಮೂಲ ಕಾರಣವನ್ನು ಸೇರಿ (ಬ್ರಹ್ಮವನ್ನು) ತಾದಾತ್ಮ್ಯವನ್ನು

ಹೊಂದುವದು ಎಲ್ಲವೂ ಮಾಯೆಯಲ್ಲಿ ಸೇರುವದು ಮಾಯೆಯು ಪರಮಾತ್ಮನ ಶಕ್ತಿ. ಶಕ್ತಿಶಕ್ತದಲ್ಲಿ ಸೇರಿ ತಾದಾತ್ಮ್ಯವನ್ನು ಹೊಂದುವದು. ("ಶಕ್ತಿ ಶಕ್ತಿಮತೋಃ ಅನನ್ಯತ್ವಾತ್" ಎಂದು ಭಾಷ್ಯ. ಗೀ. ಭಾ ಅ 14-27.) ಅವಿದ್ಯೆಯು ಮಾಯಾಕಾರ್ಯವು. ಅದರಿಂದ ಅವಿದ್ಯೆಯು ಮಾಯೆಯಲ್ಲಿ ಸೇರಿರುವದೆಂದಾಯಿತು. ಆಗ ಅದು ಮಾಯೆ ಎಂದೆನಿಸುವುದೇ ಹೊರತು ಅವಿದ್ಯೆಯೆಂದೆನಿಸುವದಿಲ್ಲ. ಜಗತ್ತು ಆಗ ಜಗತ್ತೆನಿಸುವದಿಲ್ಲ. ಜೀವನು ಎನಿಸುವದಿಲ್ಲ. ಎಲ್ಲವು ಮಾಯೆಯಲ್ಲಿ ಒಂದಾಗಿ ತಾದಾತ್ಮ್ಯವನ್ನು ಹೊಂದಿ ಮಾಯೆ ಎನಿಸುವದು. ಇದು ಅವಿರುದ್ಧವು. ಅದರಂತೆ ಅವಿದ್ಯೆಯು ಅವಿದ್ಯೆಯಾಗಿರುವದಿಲ್ಲ. ಆದರಿಂದ ಭಾಷ್ಯವು "ನಚ ಅವಿದ್ಯಾ ಕೇವಲಾ ವೈಷಮ್ಯಸ್ಯ ಕಾರಣಂ। ಏಕರೂಪತ್ವಾತ್"। ಎಂದು ಬೋಧಿಸುತ್ತದೆ. ಬರಿಯ ಅವಿದ್ಯೆಯು ಏಕರೂಪವಾಗಿರುವುದರಿಂದ ವೈಷಮ್ಯ ಕಾರಣವಲ್ಲವೆಂದು ಈ ಭಾಷ್ಯದ ಅರ್ಥವು. (ಬ್ರ: ಸೂ 2-1-36). ಏಕೆಂದರೆ ಅಲ್ಲಿ ಯಾವುದೂ ಕಾರ್ಯರೂಪದಿಂದ ಇರುವದಿಲ್ಲ. ಅದರಿಂದ "ನಿತ್ಯ ನಿವೃತ್ತಾವಿದ್ಯತ್ವಾತ್ ಈಶ್ವರಸ್ಯ"॥ ಎಂಬ ಭಾಷ್ಯವು ಸೂಕ್ತವು. ನಿರ್ದೋಷವು. ಅದರಿಂದ ಎಲ್ಲವೂ ಬ್ರಹ್ಮಸ್ವರೂಪವೆಂಬುದೇ ಅದ್ವೈತ ಸಿದ್ಧಾಂತವೆನಿಸುವದೆಂದಾಯಿತು॥.

3. ಎಲ್ಲವೂ ತಾನೇಯಾಗಿರುವ ಆ ಬ್ರಹ್ಮಸ್ವರೂಪವಾವುದೆಂದರೆ "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರರೀತ್ಯಾ (ಬ್ರ: ಸೂ. 1-11) 'ಬ್ರಹ್ಮ' ಶಬ್ದದ ವ್ಯುತ್ಪತ್ತಿನೋಡಿದರೂ ಬ್ರಹ್ಮವು ನಿತ್ಯ ಶುದ್ಧಬುದ್ಧ ಮುಕ್ತ ಸ್ವಭಾವವಾಗಿ ಸರ್ವಶಕ್ತಿ ಸಮನ್ವಿತ ಸರ್ವಜ್ಞನೆನಿಸಿ ಸರ್ವರ ಆತ್ಮನಾಗಿರುವವನೇ ಬ್ರಹ್ಮವು ಎಂಬುದು ಪ್ರಸಿದ್ಧವಾಗಿರುವದು ಎಲ್ಲರೂ ಆತ್ಮನಿರುವನೆಂದೇ ತಿಳಿದಿರುವರು. ಯಾವನೂ 'ನಾನಿಲ್ಲ' ಎಂದು ತಿಳಿದಿರುವದಿಲ್ಲ 'ನಾನಿರುವೆನು' ಎಂದೇ ಪ್ರತಿಯೊಬ್ಬನೂ ತಿಳಿದಿರುವನು. ಹಠದಿಂದ ನಾನೆಂಬಾತ್ಮನು ಇಲ್ಲವೆಂದು ಹೇಳುವದಾದರೆ 'ನಾನಿಲ್ಲ' ವೆಂದು ತಿಳಿಸುವದಕ್ಕೂ ತಾನಿದ್ದೇ ಇರಬೇಕು. ತಾನಿಲ್ಲದೇ ಇಲ್ಲವೆಂಬುದೂ ಇಲ್ಲ ಉಂಟೆಂಬುದೂ ಇಲ್ಲ. ಅದರಿಂದ ತಾನಿಲ್ಲೆನಿಸದೇ ಇರುವವನೇ ಆತ್ಮನು. ಆತ್ಮನೇ ಬ್ರಹ್ಮವು.

"ಬ್ರಹ್ಮವಿದಾಪ್ನೋತಿಪರಂ" ಶ್ರುತಿ ರೀತ್ಯಾ (ತೈ: ಉ: 2-1)

ಬ್ರಹ್ಮವನ್ನು ತಿಳಿದವನು ಮುಕ್ತನಾಗುತ್ತಾನೆಂಧು ಹೇಳಿರುವದರಿಂದ ಬ್ರಹ್ಮವನ್ನು ತಿಳಿಯಬೇಕೆಂದಾಯಿತು. ಬ್ರಹ್ಮ ಲಕ್ಷಣವನ್ನು ತಿಳಿಯದೇ ಬ್ರಹ್ಮವನ್ನರಿಯಲಾಗುವದಿಲ್ಲ. "ಯಾವದರಿಂದ ಈ ಜಗತ್ತಿಗೆ ಉತ್ಪತ್ತಿ ಸ್ಥಿತಿಲಯಗಳಾಗುತ್ತಿರುವವೋ ಅದೇ ಬ್ರಹ್ಮವು. ಅದನ್ನು ಜಿಜ್ಞಾಸೆಮಾಡಿ ಅರಿಯಬೇ"ಕೆಂದು ಶ್ರುತಿಯೇ ತಿಳಿಸುತ್ತದೆ. (ತೈ ಉ: 3–1) ಅದರಿಂದ ಜಗತ್ಕರಣವಾದ ಬ್ರಹ್ಮವನ್ನೇ ತಿಳಿಯಬೇಕೆಂದಾಯಿತು.

4 ಜಗತ್ಕಾರಣವಲ್ಲದ್ದು ಬ್ರಹ್ಮವಲ್ಲವೆಂದಾಯಿತು. ಅದರಿಂದ ಮನಸ್ಸಿನಿಂದಲೂ ಊಹಿಸಲಾಗದ ರಚನೆಯ ಸ್ವರೂಪವುಳ್ಳ ಈ ಜಗತ್ತಿನ ಸೃಷ್ಟ್ಯಾದಿಗಳನ್ನು ಶ್ರುತಿ ಹೇಳುವ ಸರ್ವಜ್ಞ ಸರ್ವಶಕ್ತನಾದ ಬ್ರಹ್ಮನಿಗೆ ಶಕ್ಯವೇ ಹೊರತು ಅನ್ಯನಿಗೆ ಶಕ್ಯವಿಲ್ಲ. (ಯಸ್ಸರ್ವಜ್ಞಸ್ಸರ್ವವಿತ್ ॥ ಎಂದು ಶ್ರುತಿ ಮು. ಉ. 1–1–9); (ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ॥ ಎಂದು ಶ್ರುತಿ. ಶ್ವೇ: ಉ 6–8)॥. ಜಿಜ್ಞಾಸಾಯೋಗ್ಯವಾದ ಬ್ರಹ್ಮವು ಸರ್ವಜ್ಞ ಸರ್ವಶಕ್ತನಾಗಿ ಜಗಜ್ಜನ್ಮಾದಿಗಳಿಗ ಕಾರಣನಾಗಿರಬೇಕು. ಅನ್ಯಥಾ ಅದು ಬ್ರಹ್ಮವೇ ಆಗದು

ಮತ್ತು ಆ ಬ್ರಹ್ಮವು ಕೈಕಾಲುಗಳಿಲ್ಲದವನು ಆದರೂ ವೇಗವಾಗಿ ನಡೆಯುವವನು. ಹಿಡಿಯುವವನು, ಕಣ್ಣಿಲ್ಲದೇ ನೋಡುವವನು ಕಿವಿ ಇಲ್ಲದೆ ಕೇಳುವವನು ಎಂದು ತಿಳಿಸುತ್ತದೆ (ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ॥ ಎಂದು ಶ್ರುತಿ. ಶ್ವೇ ಉ 3–19). ಮತ್ತು "ಸವೇತ್ತಿವೇದ್ಯಂನಚತಸ್ಯಾಸ್ತಿವೇತ್ತಾತ ಮಾಹುಗ್ರ್ಯ್ಯಂಪುರುಷಃ ಮಹಾಂತಂ" ಎಂಬ ಅದೇ ಶ್ರುತಿ ಅವನೆಲ್ಲವನ್ನು ಅರಿಯುವನು ಆದರೆ ಅವನನ್ನು ಅರಿಯುವ ನಾವನೂ ಇಲ್ಲ. ಅವನೇ ಆದಿಮಹಾಪುರುಷನೆಂದು ಶ್ರುತಿ ಬೋಧಿಸುತ್ತದೆ.

ಮತ್ತು "ವಿವಕ್ಷಿತ ಗುಣೋಪ ಪತ್ತೇಶ್ಚ" ಎಂಬ ಸೂತ್ರ ರೀತ್ಯಾ (ಬ್ರ: ಸೂ: 1–2–2) ಭಾಷ್ಯವು ಸತ್ಯಸಂಕಲ್ಪತ್ವಾದಿ ಗುಣಗಳು ಪರಬ್ರಹ್ಮನಲ್ಲಿ ಹೊಂದುಗಡೆಯಾಗುತ್ತವೆಂದೂ, ಸೃಷ್ಟ್ಯಾದಿಗಳಲ್ಲಿ ಯಾವ ಅಡ್ಡಿಯೂ ಇಲ್ಲದೆ

ಪರಮಾತ್ಮನು ಅಪ್ರತಿಬದ್ಧಶಕ್ತನೆಂದೂ ಅವನ ಸರ್ವಜ್ಞತ್ವಾದಿಗಳಿಗೆ ಜಗತ್ತಿನ ಸೃಷ್ಟ್ಯಾದಿಗಳೇ ಸಾಕಾವಷ್ಟು ನಿದರ್ಶನವೆಂದು ಬೋಧಿಸುತ್ತದೆ. ಪಂಚ ಮಹಾ ಭೂತಗಳು, ಸೂರ್ಯ, ಚಂದ್ರ ನಕ್ಷತ್ರಗಳು, ಸಮುದ್ರಗಳು ನದಿಗಳು, ಪರ್ವತಗಳು, ಘೋರಾರಣ್ಯಗಳು, ಭಯಂಕರ ಸಿಂಹಶಾರ್ದೂಲಾದಿ ಮೃಗಗಳು ತಿಮಿಂಗಿಲ ಮುಂತಾದ ಜಲಚರಗಳು ಸ್ತ್ರೀ ಪುರುಷ ಭೇದದಿಂದುವ ಒಬ್ಬರಂತೆ ಮತ್ತೊಬ್ಬನಿಲ್ಲದ ಈ ಮಾನವ ಕೋಟಿಗಳು, ಇನ್ನೂ ಅನೇಕಾದ್ಭುತ ಪಶು ಪಕ್ಷಿ ಕ್ರಿಮಿಕೀಟಾದಿಗಳು. ಇವೆಲ್ಲವನ್ನು ಸೃಷ್ಟಿಸಿ, ನಿಯಮಿಸಿ, ಪ್ರಲಯವನ್ನು ಮಾಡುವ ಪುರುಷನ ಉಚ್ಛ್ವಾಸ ನಿಶ್ವಾಸದಂತೆ ಸರ್ವಜ್ಞ ಸರ್ವಶಕ್ತನಾದ ಆ ದೇವದೇವನಿಗೆ ಸಾಧ್ಯವಲ್ಲದೆ ಯಾವ ಮನುಷ್ಯ ಮಾತ್ರನಿಗೂ ಸಾಧ್ಯವಿಲ್ಲವೆಂಬುದು ಲೋಕವಿದಿತವು ಸರ್ವಾನುಭವವು

ಈ ಮಹಾದ್ಭುತ ಜಗತ್ತನ್ನು ಪರಮಾತ್ಮನು ಮಾಡದೇ ಇದ್ದಿದ್ದರೆ ದೇವರನ್ನು ತಿಳಿಯುವದಕ್ಕೆ ದ್ವಾರವೇ ಇಲ್ಲದೆ ಸಾಧ್ಯವಾಗುತ್ತಿರಲಿಲ್ಲವೆಂದೂ ಮನುಜನಿಗಿರುವ ಅಲ್ಪಬುದ್ಧಿಯಿಂದ ಸರ್ವಜ್ಞನಾದ ಪರಮಾತ್ಮನು ಈ ಜಗತ್ತನ್ನು ಏಕೆ ಮಾಡಿದನೆಂದೂ ತರ್ಕಿಸಿ ವಾದಿಸುವುದು ಯುಕ್ತವಲ್ಲವೆಂದೂ, ಪರಮೇಶ್ವರನಿಗೆ ಅದರಿಂದ ಯಾವ ಪ್ರಯೋಜನವನ್ನು ಶಾಸ್ತ್ರದಲ್ಲಿಯೂ ಹೇಳಿಲ್ಲವೆಂದೂ ಅವನು ಸ್ವಭಾವದಿಂದಲೆ ಕೇವಲ ಲೀಲಾರೂಪವಾದ ಪ್ರವೃತ್ತಿಯು ಉಂಟಾಗಿರುವದೆಂದೂ ಭಾಷ್ಯವು ಬೋಧಿಸುತ್ತದೆ, ಸ್ವಭಾವವನ್ನು ಆಕ್ಷೇಪಿಸುವದು ಯುಕ್ತವಲ್ಲವೆಂದೂ ಹೇಳಿದೆ.

ಆದರಿಂದ ಜಗತ್ಸೃಷ್ಟ್ಯಾದಿಗಳು ಪರಮೇಶ್ವರಾಧೀನವೆಂದೇ ಗ್ರಹಿಸ ಬೇಕು. ಇದಲ್ಲದೆ ಸೃಷ್ಟಿ ಶ್ರುತಿಯು ಪರಮಾರ್ಥ ವಿಷಯವಲ್ಲ ಅವಿದ್ಯಾಕಲ್ಪಿತ ನಾಮರೂಪ ವ್ಯವಹಾರವನ್ನು ಕುರಿತದ್ದಾಗಿರುವದು. ಬ್ರಹಾತ್ಮಭಾವವನ್ನು ಪ್ರತಿಪಾದಿಸುವದರಲ್ಲಿ ತಾತ್ಪರ್ಯವುಳ್ಳದ್ದಾಗಿದೆ ಎಂಬುದನ್ನು ಮರೆಯಬಾರದು (ಬ್ರ. ಸೂ· 2–1–33. ಸೂ॥ ಲೋಕವತ್ತು ಲೀಲಾಕೈವಲ್ಯಂ||)

5 "ತತ್ಸೃಷ್ಟ್ವಾ। ತದೇವಾನು ಪ್ರಾವಿಶತ್॥, ಆತ್ಮಾನಗ್ಂ ಸ್ವಯಮಕುರುತ ॥ ಎಂಬ ಶ್ರುತಿಗಳು (ತೈ. 2–7–1). ಬ್ರಹ್ಮವು ತನ್ನ

ಸ್ವರೂಪ ಹಾನಿಇಲ್ಲದೆ ತಾನೇ ಈ ಜಗದಾಕಾರವನ್ನು ಹೊಂದಿರುವನೆಂದು ಬೋಧಿಸುತ್ತವೆ ಮತ್ತು ಹೀಗೆ ಸೃಷ್ಟಿಸಿ ಆ ಭೂತಗಳಲ್ಲಿ ತಾನೇ ಈ ಜೀವರೂಪದಿಂದ ಅನುಪ್ರವೇಶಮಾಡಿರುವನೆಂದು ಹೇಳುತ್ತದೆ. ಈ ಅನು ಪ್ರವೇಶವು ಅನ್ಯರಿಗಾರಿಗೂ ಸಾಧ್ಯವಿಲ್ಲ.

6 ಶಂ:—ಯಾವ ಉಪಾದಾನವೂ ಇಲ್ಲದೇ (ಅನ್ಯಪದಾರ್ಥವನ್ನು ಯಾವುದನ್ನು ತೆಗೆದುಕೊಳ್ಳದೇ) ಆತ್ಮನೊಬ್ಬನೇ ಇರುವಾಗ ಲೋಕಗಳನ್ನು ಸೃಷ್ಟಿಮಾಡುತ್ತಾನೆಂಬುದು ಹೇಗೆ ಸರಿ ? ಎಂದು ಶಂಕಿಸಿದರೆ,

ಸಮಾಧಾನ.—ಇದೇನೂ ದೋಷವಲ್ಲ. ಜಾಣನಾದ ಮಾಯಾವಿಯು ಯಾವ ಉಪಾದಾನವೂ ಇಲ್ಲದೆ ತನ್ನನ್ನೇ ಆಕಾಶದಲ್ಲಿ ನಡೆಯುತ್ತಿರುವ ಮತ್ತೊಬ್ಬನಂತೆ ನಿರ್ಮಿಸಿಕೊಳ್ಳುತ್ತಾನೋ ಆದರಂತೆ ಸರ್ವಜ್ಞನಾದ ಎಲ್ಲಾ ಶಕ್ತಿಗಳುಳ್ಳ ಮಹಾಮಾಯಾವಿಯಾದ ದೇವನು ತನ್ನನ್ನೇ ಜಗದ್ರೂಪದಿಂದ ನಿರ್ಮಿಸಿಕೊಳ್ಳುತ್ತಾನೆಂಬುದು ಯುಕ್ತವೇದು ಹೇಳಬಹುದು. ಪ್ರತಿಯೊಬ್ಬನು ತನ್ನ ಸ್ವಪ್ನದಲ್ಲಿ ತಾನೇ ತನ್ನ ಸ್ವರೂಪ ಹಾನಿ ಇಲ್ಲವೆ ಯಾವ ಉಪಾದಾನವಿಲ್ಲದೆ ಜಗದಾಕಾರವನ್ನು ಹೊಂದುವದು ಸರ್ವಾನುಭವಸಿದ್ಧವು ಎಂದು ಭಾಷ್ಯವು ಬೋಧಿಸುತ್ತದೆ.

7 "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು ಶ್ರುತಿ

a) ಬ್ರಹ್ಮವು ಸತ್ಯಾಜ್ಞಾನಾನಂತ ಸ್ವರೂಪವೆಂದು ಬೋಧಿಸುತ್ತದೆ. (ತೈ ಉ 2–1). ಬ್ರಹ್ಮವು ಬಹಳ ದೊಡ್ಡದಾದ್ದರಿಂದ ಬ್ರಹ್ಮವೆಂದು ಹೇಳಿದೆ. ಈ ಬ್ರಹ್ಮಾಂಡಕ್ಕಿಂತ ಬಹಳ ದೊಡ್ಡದಾದ್ದರಿಂದ ಬ್ರಹ್ಮವೆಂದಿದೆ ಅದು ದೊಡ್ಡದೆನಲು ಕಾರಣವೇನೆಂದರೆ ಎಲ್ಲಕ್ಕೂ ಸೃಷ್ಟಿಕರ್ತ ಅವನೊಬ್ಬನೇ ಎಂದು ಭಾಷ್ಯವು ಬೋಧಿಸುತ್ತದೆ (ಸರ್ವಸ್ಯಸ್ರಷ್ಟ್ರ ಇತಿಬ್ರೂಮಃ ॥ ಎಂದು ಭಾಷ್ಯ; ಬೃಹತ್ತಮತ್ವಾತ್ ಬ್ರಹ್ಮ ॥ ಎಂದೂ ಭಾಷ್ಯ)

b) ಸತ್ಯವೆಂದರೆ ಸರ್ವಕಾರವಾಗಿ ಯಾವಾಗಲೂ ಇಲ್ಲೆನಿಸದೇ (ಮೂರು ಕಾಲುಗಳಲ್ಲಿಯೂ) ಇರುವದೆಂದರ್ಥ.

c) ಜ್ಞಾನಸ್ವರೂಪವೆಂದರೆ ಎಲ್ಲವನ್ನು ತಿಳಿಯುತ್ತಿರುವ ಚೈತನ್ಯವು ಮತ್ತು ಎಲ್ಲಾ ಕಾರಣ ಧರ್ಮಗಳುಳ್ಳದ್ದು ಅದೆಲ್ಲವನ್ನು ತಿಳಿಯುತ್ತಿರುವದೇ ಹೊರತು ಅದನ್ನು ತಿಳಿಯುವ ಮತ್ತೊಂದು ಜ್ಞಾನವಿಲ್ಲ–ಎಂದರೆ ಅದಕ್ಕೆ ಸಮನೂ ಇಲ್ಲ. ಅಧಿಕನೂ ಇಲ್ಲ. ಅದರಂತೆ ಮತ್ತೊಂದಿಲ್ಲ ಎಲ್ಲವೂ ಅದಕ್ಕೆ ವಿಷಯ ವಿಷಯವುಜ್ಞೇಯವೆನಿಸುವದು ಅದನ್ನರಿಯುವದು ಜ್ಞಾನವೆನಿಸುವದು ಜ್ಞಾನವರಿಯದೆ ಯಾವದೂ ಸಂಭವಿಸುವುದೇ ಇಲ್ಲ ಅದರಿಂದ ಜ್ಞಾನವೇ ಜಗತ್ಕಾರಣವು ಎಲ್ಲವನ್ನೂ ಅರಿಯುತ್ತಿರುವದರಿಂದ ಜ್ಞಾನವೇ ಸರ್ವಜ್ಞವೆಂದು ಹೇಳಲ್ಪಟ್ಟಿದೆ ಸದ್ರೂಪನಾದ ಪರಮಾತ್ಮನೇ ಚಿದ್ರೂಪನೆಂದೂ ಆಯಿತು. ಜ್ಞಾದವು ನೋಡಿ ತಿಳಿಯ ಎತ್ತಿರುವದರಿಂದ ದೃಗ್ರೂಪವೆಂದೂ ಹೇಳಲ್ಪಡುತ್ತದೆ ಜ್ಞೇಯವು ತಿಳಿಯಲ್ಪಟ್ಟು ದೃಶ್ಯವೆನಿಸುವದು. ಜ್ಞಾತೃವು—ತಿಳಿಯುವವನು— ಜ್ಞಾತೃವೇ ಜ್ಞೇಯವು ಜ್ಞೇಯವೇ. ಜ್ಞೇಯ ಧರ್ಮಗಳು ಜ್ಞಾತೃವನ್ನು ಟು ವದಿಲ್ಲ. ದೃಶ್ಯ ಧರ್ಮಗಳೊಂದೂ ದೃಕ್ಕಿ ನೆರಾಳಗಿಲ್ಲ. ಜ್ಞಾನದಲ್ಲಿ ಅಜ್ಞಾನ ವಿಲ್ಲ. ಆದರೆ ಜ್ಞಾನವನ್ನು ಬಿಟ್ಟರೆ ಅಜ್ಞಾನಕ್ಕೆಡೆಯಿಲ್ಲ. ಮರೆವೆಗೆ ಮರೆವೇ ಆಶ್ರಯವಾಗದು. ಅರಿವನ್ನು ಬಿಟ್ಟು ಮರೆವೆಗೆ ಅನ್ಯಾಶ್ರಯವಿಲ್ಲ. ಅದು ಉಳ್ಳದಲ್ಲ. ಇಲ್ಲದ್ದಲ್ಲ ಅನಿರ್ವಚನೀಯವು ಸಮ್ಯಕ್ ಜ್ಞಾನವು ದಿವ್ಯ ಜ್ಞಾನವು. ಅಭಿನ್ನ ಜ್ಞಾನವು ಜ್ಞಾನವು, ಜ್ಞಾನವು ನಿತ್ಯವು ನಿರ್ವಿಕಾರವು ಪರಮಾರ್ಥವು.

d) ಜ್ಞಾನವು ಅನಂತವು ದೇಶಕಾಲಾತೀತವಾಗಿ ಸರ್ವತ್ರ ಯಾವಾ ಗಲೂ ಇರುವದು. ನಿರಾಕಾರವು ಸರ್ವ ವ್ಯಾಪಕವು ಜ್ಞಾನವೆಂಬುದು ಸರ್ವತ್ರ ಇರುವದಾಗಿ ಒಂದೇ. ಅದನ್ನರಿಯುವದು ಮತ್ತೊಂದು ಜ್ಞಾನವೇಕಿರಬಾರದು? ಎಂದು ಶಂಕಿಸಿದರೆ ಅದು ಸರಿಯಲ್ಲ. ಏಕೆಂದರೆ ಅದನ್ನರಿಯುವದು ಮತ್ತೊಂದು, ಇನ್ನದನ್ನರಿಯುವದು ಮತ್ತೊಂದೆಂದು ಅನವಸ್ಥಾ ಪ್ರಸಂಗ ವಾಗುವದು. ಅಷ್ಟೇ ಅಲ್ಲ. ಇನ್ನೊಂದಿದೆ ಎಂದರೆ ಅದು ವಿಷಯವೆನಿಸಿ ಈ ಜ್ಞಾನಕ್ಕೇ ಜ್ಞೇಯವೆನಿಸುವದೇ ಹೊರತು ಅದು ಜ್ಞಾನವೆನಿಸುವದೇ ಇಲ್ಲ

e) ಎಲ್ಲವನ್ನರಿಯುವದು ಜ್ಞಾನವೆಂದ ಮೇಲೆ ಆ ಜ್ಞಾನವನ್ನು ಅರಿಯುವದು ಯಾವದು ? ಎಂಬರೆ ಜ್ಞಾನವೇ ಇನ್ನಾರೂ ಇಲ್ಲವಲ್ಲ.

ಜ್ಞಾನಕ್ಕೆ ಸಮನಿಲ್ಲ. ಅಧಿಕನಿಲ್ಲ ಚೇತನವೆನಿಸಿ ಮತ್ತೊಂದಿಲ್ಲ. ಆದರಿಂದ ಜ್ಞಾನವನ್ನು ಜ್ಞಾನವೇ ಅರಿಯುವದರಿಂದ ಅದು ಸ್ವಯಂ ಪ್ರಕಾಶವೆನಿಸುತ್ತದೆ ಆತ್ಮನು ಜ್ಞಾನ ಸ್ವರೂಪನಾದ್ದರಿಂದ ಆದಿತ್ಯನಂತೆ ತಾನು ಬೆಳಗುತ್ತಾ ಸರ್ವವನ್ನು ಬೆಳಗುತ್ತಿರುವನು. ಆದರಿಂದ ಅವನು ಸರ್ವಜ್ಞನೆನಿಸಿರುವನು ಆದರಿಂದ ಜ್ಞಾನ ಸ್ವರೂಪನಾದ ಆತ್ಮನು ಅಸಂಗ ಚಿದ್ರೂಪನೆಂದೂ ಸಾಕ್ಷಿ ಎಂದೂ ಹೇಳಿದೆ. ಅವನು ಜ್ಞಾನ ಸ್ವರೂಪನೆನಿಸುತ ಒಬ್ಬನೇ. ಎರಡನೆಯವನು ಯಾರೂ ಇಲ್ಲ. ಅವನೇ ಆತ್ಮನು. ಅವನೇ ಬ್ರಹ್ಮವು.

f) ಅವನು ನಿತ್ಯ ಸ್ವರೂಪನು. ಅಸ್ತ್ರ ಶಸ್ತ್ರಗಳು ಅವನನ್ನು ಸೋಕುವದಿಲ್ಲ. ಅವನನ್ನು ವಾಯುವು ಶೋಷಿಸದು ಅಗ್ನಿಯು ಸುಡಲಾರದು. ನೀರು ನೆನಿಸದು. ಭೂಮಿಯು ಹಿಡಿಸಲಾರದು ಅವನು ಯಾವ ಉಪಾಧಿಯು ಇಲ್ಲದವನು—ಎಂದರೆ ನಿರುಪಾಧಿಕ ಸ್ವರೂಪನು. ಸೃಷ್ಟ್ಯಾದಿಗಳು ಮೊದಲುಗೊಂಡು ಜ್ಞಾನವಿಲ್ಲದೆ ಯಾರಿಗೂ ಯಾವ ಕಾರ್ಯವೂ ಯಾವ ಕಾಲದಲ್ಲಿಯೂ ಆಗುವದಿಲ್ಲವಾದ್ದರಿಂದ ಆತ್ಮನು ಸರ್ವ ಶಕ್ತನೆನಿಸುವನು (ಆತ್ಮಾ ಚ ಬ್ರಹ್ಮ ॥ ಎಂದು ಭಾಷ್ಯ.) ಭೂತವಸ್ತುವೆನಿಸಿ ಅನುಭವವೇದ್ಯವೆನಿಸಿ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವವಾದ ಸರ್ವಜ್ಞ ಸರ್ವ ಶಕ್ತಿ ಸಮನ್ವಿತನೆನಿಸಿ ಈ ದೇಹದೊಳಗಿದ್ದು ವ್ಯವಹರಿಸುತ್ತಿರುವ ಆತ್ಮನೇ ಬ್ರಹ್ಮವೆನಿಸಿ ಸದಾ ಬೆಳಗುತ್ತಿರುವದು (ಅಸ್ತಿತಾವದ್ಬ್ರಹ್ಮ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವಂ, ಸರ್ವಜ್ಞಂ, ಸರ್ವ ಶಕ್ತಿ ಸಮನ್ವಿತಂ ॥ ಎಂದು ಭಾಷ್ಯ.) ಆದರಿಂದ ಅವನು ಏಕೋಽದ್ವಿತೀಯನೆಂದು ನಿಶ್ಚಯವಾಗುತ್ತದೆ ಆತ್ಮನು ಅವಿನಾಶಿ. ನಿತ್ಯನು ಎಂದೂ ಆಯಿತು.

g) ಬ್ರಹ್ಮವು ನಿರಾಧಾರನಾದ ನಿರುಪಾಧಿಕ ಜ್ಞಾನ ಸ್ವರೂಪನು ಆದರಿಂದ ಅವನೇ ಸರ್ವಾಧಾರ ಸ್ವರೂಪನು ಮತ್ತು ಸರ್ವಕಾರಣ ಸ್ವರೂಪನು. ನಿರವಯವನು ನಿಷ್ಕ್ರಿಯನು. ಸ್ಥೂಲ ಶರೀರ ರಹಿತನು. ಆದರಿಂದ ಸ್ತ್ರೀ ಪುರುಷನಲ್ಲ ಜನನ, ಮರಣ ರೋಗಾದಿ ಉಪದ್ರವಗಳಿಲ್ಲ, ರಾಗಾದಿ ದೋಷ ರಹಿತನು, ಅಸಂಸಾರಿ. ಪುರುಷನಲ್ಲ ಸ್ತ್ರೀ ಬೇಕಿಲ್ಲ. ಸ್ತ್ರೀ ಅಲ್ಲ ಪುರುಷನು ಬೇಕಿಲ್ಲ ನಿರ್ಮೋಹಿ. ಜಾತಿ, ನೀತಿ, ವರ್ಣಾಶ್ರಮಗಳು, ಕುಲ ಗೋತ್ರಗಳು, ತಂದೆ ತಾಯಿ ಬಾಂಧವ್ಯಗಳು. ಜಾತಾ ಶೌಚ, ಮೃತಾ ಶೌಚಗಳು—ಇವೆಲ್ಲವೂ

ಸ್ಥೂಲ ಶರೀರ ಧರ್ಮಗಳು. ಇವುಗಳಲ್ಲಿಯಾವ ಧರ್ಮವೂ ನಿರ್ದೇಹ ತತ್ತ್ವನಾದ ಆತ್ಮನಿಗೆ ಇಲ್ಲ ಸಕಲ ಶರೀರಗಳಲ್ಲಿರುವ ಆತ್ಮನು ಸರ್ವ ವ್ಯಾಪಕನಾಗಿ ಒಬ್ಬನೇಯಾಗಿರುವನು. ದೇಹಕ್ಕಾಗುವ ಸಕಲ ಕರ್ಮಗಳು ಆತ್ಮನಿಗಿಲ್ಲ

h) ಸ್ಥೂಲ ಶರೀರವಿಲ್ಲದ್ದರಿಂದ ಪ್ರಾಣಗಳೂ ಇಲ್ಲ ಪ್ರಾಣ ಧರ್ಮಗಳಾದ ಕ್ಷುತ್ಪಿಪಾಸೆಗಳು, ಚಲನೆಯು, ಆಯಾಸವು, ಸಂಕಟಗಳು, ಮುಂತಾದ ಪ್ರಾಣ ಧರ್ಮಗಳಾವುದೂ ಆತ್ಮನಿಗಿಲ್ಲ (ಅಪ್ರಾಣೋ ಹ್ಯಮನಾ ಶ್ಶುಭ್ರಃ ॥ ಎಂದು ಶ್ರುತಿ.) ಆದಕ್ಕಾಗಿಯೇ ಆತ್ಮನು ಪ್ರಾಣವಿಲ್ಲಗವನೆಂದು ಶ್ರುತಿ ಹೇಳುತ್ತದೆ.

i) ದಶೇಂದ್ರಿಯಗಳೂ ಇಲ್ಲ ಆದರಿಂದ ಶಬ್ದಾದಿ ವಿಷಯಗಳು ಆತ್ಮನಲ್ಲಿಲ್ಲ. ಅತ್ಮನು ಆದರಿಂದ ನಿರ್ವಿಶೇಷನೆಂದು ಹೇಳಲ್ಪಟ್ಟಿರುವನು. ಯಾವ ವ್ಯವಹಾರವೂ ಅವನಲ್ಲಿಲ್ಲ. ಆತ್ಮನು ನಿರಾಕಾರನು ಅವಾಙ್ಮನಸ ಗೋಚರನು ಆದರಿಂದ ಆತ್ಮನನ್ನು ದೃಶ್ಯ ವಿಲಕ್ಷಣದಿಂದ ಕುರುಹಿಟ್ಟು ಶ್ರುತಿ ಲಕ್ಷಣಗಳನ್ನು ಕಲ್ಪಿಸಿ ಬೋಧಿಸಿರುತ್ತದೆ

j) "ರಸೋವೈಸಃ" ಎಂಬ ಶ್ರುತಿ ಬ್ರಹ್ಮವು ಸುಖ ಸ್ವರೂಪವೆಂದು ಹೇಳುತ್ತದೆ. ಜ್ಞಾನವು ಹೇಗೆ ಆತ್ಮನ ಸ್ವರೂಪವೋ, ಹಾಗೆಯೇ ಆತ್ಮನು ಸುಖ ಸ್ವರೂಪವೂ ಅಹುದು. ಸದ್ರೂಪವೇ, ಚಿದ್ರೂಪವೂ ಹೌದು ಚಿದ್ರೂಪವು ಸುಖ ಸೂಪವೂ ಹೌದು. ಇದೇ ಸಚ್ಚಿದಾನಂದವೆನಿಸುವದು ಸಚ್ಚಿತ್ಸುಖ ರೂಪನಾದ ಆತ್ಮನೇ ನಿತ್ಯಾಖಂಡ ರೂಪನೂ ಅಹುದು. ಸುಖವು ಸ್ವಾಭಾವಿಕವು. ದುಃಖವು ಆಗಂತುಕವು ಸುಖಕ್ಕೆ ಯಾರೂ ಕಾರಣವು ಕೇಳುವದಿಲ್ಲ ದುಃಖ ಬಂದರೆ ಕಾರಣವನ್ನು ಕೇಳುತ್ತಾರೆ ಅದರಿಂದ ಮಗುವು ಆಡಿಕೊಂಡಿದ್ದರೆ ಯಾರೂ ಕಾರಣ ಕೇಳುವದಿಲ್ಲ ಅಳುತ್ತಿದ್ದರೆ ಕಾರಣವನ್ನು ಕೇಳುತ್ತಾರೆ. ಆದರಿಂದ ಸುಖವು ಸ್ವಾಭಾವಿಕವು. ಯಾವವಿಧ ಸುಖವಾದರೂ ತನ್ನಲ್ಲಿಯೇ ತೋರಬೇಕು. ಸುಖಕ್ಕಾಗಿಯೇ ಲೋಕದಲ್ಲಿ ಸರ್ವರ ಪ್ರವೃತ್ತಿಗಳು ತನ್ನ ಬಿಟ್ಟು ಬೇರೆ ಇನ್ನೆಲ್ಲೂ ಸುಖವು ತೋರುವದಿಲ್ಲ. ಜ್ಞಾನಾನಂದಗಳಿಗೆ ಸಂದಿಲ್ಲ. ತಾನು ಸುಖವೆಂದು ಭಾವಿಸದಿದ್ದರೆ ಯಾವದೂ ಸುಖವೆನಿಸುವದಿಲ್ಲ. ಆತ್ಮನು ಅವಿನಾಶಿ. ಆದರಿಂದ ನಿತ್ಯನು. ಸಕಲ ಶರೀರಗಳಲ್ಲಿಯು ಆತ್ಮನು ವ್ಯವಹರಿಸುತ್ತಿರುವನು. ಆದರಿಂದ ಅವನು ಸರ್ವವ್ಯಾಪಿ. ಅಖಂಡನು.

8 ಮತ್ತು ಸರ್ವ ಭೂತಗಳಲ್ಲಿಯೂ ಹೃದಯದಲ್ಲಿ ಪರಮಾತ್ಮನು ಬುದ್ಧಿ ಎಂಬ ಗುಹೆಯಲ್ಲಿ ಬುದ್ಧಿಯ ವೃತ್ತಿಗಳಿಗೆ ಸಾಕ್ಷಿಯಾಗಿ ಬೆಳಗುತ್ತಿರುವನು ಅವನಲ್ಲಿ ಮನವಿಲ್ಲದ್ದರಿಂದ ನಿಶ್ಚಿಂತನಾಗಿ ನಿರ್ವಿಕಾರನಾಗಿ ಒಂದೇ ರೂಪದಲ್ಲಿ ಅವಸ್ಥಿತನಾಗಿ ಶೋಭಿಸುತ್ತಿರುವನು ಇದು ಅವನ ಸಹಜ ಸ್ವರೂಪವು. ಅದೇ ಪರಮಾರ್ಥವೆನಿಸುವದು' (ಅತಃ ಆತ್ಮನಃ ಕೇವಲತ್ವಂ ಸ್ವಾಭಾವಿಕಂ ॥ ಎಂದು ಭಾಷ್ಯ. ಗೀ: ಭಾ: ಅ 18–17). ಇದು ಸ್ವಯಂ ಸಿದ್ಧವಾಗಿರುವದು. ಸಾಧನೆಯಿಂದ ಸಾಧಿಸತಕ್ಕದ್ದಲ್ಲ. ಸಾಧನೆಯಿಂದ ಸಾಧ್ಯವಾದದ್ದು ಅನಿತ್ಯವೆನಿಸುವದು.

ಇದನ್ನು ಕೆಲವರು ಶೂನ್ಯವೆನ್ನುತ್ತಾರೆ ಅದು ಸರಿಯಲ್ಲ. ಏಕೆಂದರೆ, ಯಾವದೂ ಇಲ್ಲವೆಂದು ಅದನ್ನು ಶೂನ್ಯವೆಂದು ತಿಳಿಯದೇ ಹೇಳಲಾಗುವದಿಲ್ಲ. ಅದರಿಂದ ಅದನ್ನು ತಿಳಿಯುತ್ತಿರುವವನೇ ಆತ್ಮನೆಂಬುದು ಶ್ರುತ್ಯಂತ ಸಿದ್ಧಾಂತವು - (ಯತ್ರ. ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯ ದ್ವಿಜಾನಾತಿ ಸ ಭೂಮಾ ಸ ಆತ್ಮಾ ಸ ವಿಜ್ಞೇಯಃ ॥ ಎಂದು ಶ್ರುತಿ ಛಾಂ: ಉ: 7–24 1.) ಅದರಿಂದ ಆತ್ಮನು ಶೂನ್ಯನಲ್ಲ ಶೂನ್ಯಕ್ಕೆ ಶಾಸ್ತ್ರವು ಲಕ್ಷಣವನ್ನು ಹೇಳುವದೇ ? ಆತ್ಮನು ನಿರ್ವಿಕಾರ ನಿರ್ವಿಶೇಷ ನಿರಾಕಾರ ನಿರಂತರ ಚೈತನ್ಯ ಸ್ವರೂಪನಾಗಿ ಜಗತ್ ಸೃಷ್ಟ್ಯಾದಿಗಳಿಗೆ ಕಾರಣನಾದ್ದರಿಂದ ಸರ್ವಜ್ಞ ಸರ್ವಶಕ್ತ ಸರ್ವಾಧಾರ ಸ್ವರೂಪನೆಂದೂ ಏಕೋದ್ವಿತೀಯನೆಂದೂ ನಿಶ್ಚಯವಾಗುತ್ತದೆ.

9 "ಸರ್ವೋಪೇತಾ ಚ ತದ್ದರ್ಶನಾತ್" ಎಂಬ ಸೂತ್ರ ರೀತ್ಯಾ (ಬ್ರ: ಸೂ: 2–1–30) ಬ್ರಹ್ಮವು ಎಲ್ಲಾ ಶಕ್ತಿಗಳಿಂದಲೂ ಕೂಡಿರುವವೆಂದು ಭಾಷ್ಯವು ಬೋಧಿಸುತ್ತದೆ. ಆದರೆ ಶಕ್ತಿಯೆಂದು ಅದನ್ನುಳ್ಳ ಶಕ್ತನೆಂದೂ ಭಿನ್ನಿಸಿ ಹೇಳಿದರೆ ಅದ್ವೈತ ಸಿದ್ಧಾಂತ ಹಾನಿಯಾಗುವದಿಲ್ಲವೇ ? ಎಂದರೆ ಅದಕ್ಕೆ ಸಮಾಧಾನ.—ಇಲ್ಲ. ಹಾಗಾಗುವದಿಲ್ಲ. ಶಕ್ತಿಯು ಶಕ್ತನಿಗೆ ಭಿನ್ನವಲ್ಲ. ಅದು ಅವ್ಯಕ್ತವು ಆತ್ಮನಿಗೆ ಅನನ್ಯವು. ಆತ್ಮನೊಡನೆ ತಾದಾತ್ಮ್ಯಯುಳ್ಳದ್ದು. ಕಾರ್ಯದಿಂದ ಅದು ವ್ಯಕ್ತವಾಗತಕ್ಕದ್ದು. ಅದರಿಂದ ಸದಸದ್ವಿಲಕ್ಷಣವು. ಅನಿರ್ವಚನೀಯವು. (ಶಕ್ತಿ ಶಕ್ತಿಮತೋಃ ಅನನ್ಯತ್ವಾತ್ ॥ ಎಂದು ಭಾಷ್ಯ.

ಅ 14–27.) ಅದು ಪರಮಾತ್ಮನೊಡನೆ ತಾದಾತ್ಮ್ಯವನ್ನು ಹೊಂದಿ ಅವ್ಯಕ್ತವಾಗಿರುವದರಿಂದ ಸಿದ್ಧಾಂತಹಾನಿ ಇಲ್ಲವೆನಬೇಕು. ವಟ ವೃಕ್ಷವು ಶಕ್ತಿ ರೂಪವಾಗಿ ವಟ ಬೀಜದಲ್ಲಿರುವದೆಂದು ತಿಳಿದ ಮಾತ್ರಕ್ಕೆ ಬೀಜ ವೃಕ್ಷಗಳೆಂದು ಎರಡಾಗುವದೆ ? ಬ್ರಹ್ಮವು ಸರ್ವ ಶಕ್ತನೆಂದಮೇಲೆ ಅವನಂತೆ ಮತ್ತೊಬ್ಬನಿಲ್ಲ ಆದರಿಂದ ಬ್ರಹ್ಮವು ಸರ್ವಜ್ಞ ಸರ್ವ ಶಕ್ತನೆನಿಸಿ ಏಕೋದ್ವಿತೀಯನೆಂದು ನಿಶ್ಚಯವಾಗುತ್ತದೆ ಬ್ರಹ್ಮವು ಒಂದೇಯಾದರೂ ವಿಚಿತ್ರ ಶಕ್ತಿ ಯೋಗದಿಂದ ವಿಚಿತ್ರ ಪರಿಣಾಮವು ಕ್ಷೀರಾದಿಗಳಂತೆ ಆಗಬಹುದು. (ಬ್ರ. ಸೂ. 2–1–24)

10 "ಪ್ರವೃತ್ತೇಶ್ಚ" ಎಂಬ ಸೂತ್ರ ರೀತ್ಯಾ (ಬ್ರ: ಸೂ 2–2–2) ಭಾಷ್ಯವು ಪ್ರವೃತ್ತಿರಹಿತನಾದರೂ ಬ್ರಹ್ಮವು ಸರ್ವಗತನಾಗಿ ಸರ್ವಾತ್ಮನಾಗಿ ಸರ್ವಜ್ಞನಾಗಿ ಸರ್ವ ಶಕ್ತನಾಗಿರುವದರಿಂದ ತನ್ನ ಸ್ವರೂಪ ಹಾನಿ ಇಲ್ಲದೆ ಸರ್ವವನ್ನು ಪ್ರವರ್ತಿಸುವನೆಂಬುದು ಉಪಪನ್ನವಹುದು. ಆದರಿಂದ ಸರ್ವ ಕಾರಣನಾದ ಸರ್ವಜ್ಞನಾದ ಈಶ್ವರನಿಗೆ ಪ್ರವೃತ್ತಿಯು ಸಂಭವಿಸಬಹುದು ಎಂದು ಬೋಧಿಸುತ್ತದೆ

11 "ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್" ಎಂಬ ಸೂತ್ರರೀತ್ಯಾ (ಬ್ರ: ಸೂ: 2–2–4) ಭಾಷ್ಯವು ಬ್ರಹ್ಮವು ಸರ್ವಜ್ಞ ಸರ್ವಶಕ್ತಿ ಮಹಾಮಾಯಾ ಸ್ವರೂಪನಾದ್ದರಿಂದ ಪ್ರವೃತ್ತಿ ಅಪ್ರವೃತ್ತಿಗಳು ವಿರುದ್ಧವಲ್ಲವೆಂದು ಬೋಧಿಸುತ್ತದೆ

12 "ಪುರುಷಾಶ್ಮವದಿತಿಚೇತ್ ತಥಾಪಿ" ಎಂಬ ಸೂತ್ರರೀತ್ಯಾ (ಬ್ರ: ಸೂ 2–2–7) ತನ್ನ ಸ್ವರೂಪವನ್ನು ನೋಡಿದರೆ ಬ್ರಹ್ಮವು ಕೇವಲ ಔದಾಸೀನ್ಯ ರೂಪನಾಗಿಯೂ, ತನ್ನ ಮಾಯೆಯನ್ನಾಶ್ರಯಿಸಿ ಪ್ರವರ್ತಕ ರೂಪನಾಗಿಯೂ ಇರಬಹುವುದೆಂಬ ಅತಿಶಯವಿರುತ್ತದೆಂದು ಬೋಧಿಸುತ್ತದೆ

ಈ ರೀತಿಯಲ್ಲಿ ಬ್ರಹ್ಮಸ್ವರೂಪವು ಸಮಾನಾಧಿಕ ವರ್ಜಿತನಾಗಿ ಏಕೋಽದ್ವಿತೀಯನೆಂದು ನಿಶ್ಚಯಿಸಿ ನಿರೂಪಿಸಲಾಯಿತು. ಬ್ರಹ್ಮವು ಸರ್ವಜ್ಞ ಶಕ್ತಿ ಮಹಾಮಾಯಾ ಸ್ವರೂಪನಾದ್ದರಿಂದ ಸರ್ವಕಾರಣ ಧರ್ಮಗಳು ಬ್ರಹ್ಮಕ್ಕೆ

ಉಪಪನ್ನವಹುದೆಂದು ತೋರಿಸಲಾಯಿತು. ಬ್ರಹ್ಮವು ನಿರಂತರವು ಚೈತನ್ಯ ಸ್ವರೂಪವಾಗಿ ಸಚ್ಚಿದಾನಂದ ನಿತ್ಯಾಖಂಡ ವಸ್ತುವೇದು ತೋರಿಸಲಾಯಿತು. ಬ್ರಹ್ಮವು ಸರ್ವಜ್ಞ ಸರ್ವಶಕ್ತನಾದ್ದರಿಂದ ಬ್ರಹ್ಮವೇ ಜಗತ್ತಿನ ಸೃಷ್ಟಿಸ್ಥಿ ಲಯಗಳಿಗೆ ಕಾರಣವೆಂದು ತೋರಿಸಲಾಯಿತು. ಉಪಾದಾನಕಾರಣವಿಲ್ಲದೆ ಸೃಷ್ಟ್ಯಾದಿ ಗಳಾಗುವದೆಂತೆಂದು ಶಂಕಿಸಲಾಗಿ ತತ್ಪರಿಹಾರಕ್ಕಾಗಿ ಬ್ರಹ್ಮವು ನಿಮಿತ್ತ ಕಾರಣವೆಂದೂ, ಅವನ ಸ್ವರೂಪಭೂತವಾದ ಪ್ರಕೃತಿಯು ಉಪಾಧಾನ ಕಾರಥವೆಂದೂ, ಪ್ರಕೃತಿಯು ತನಗೆ ಅವನ್ಯವಾಗಿದ್ದರಿಂದ ತಾನೇ ಅಭಿನ್ನ ನಿಮಿತ್ತೋಪಾದಾನ ಕಾರಣವೆಂಬುದು ಉಪಪನ್ನವಾಗುವದೆಂದೂ, ಅದರಿಂದ ತನ್ನ ಮಾಯಾ ಶಕ್ತಿಯಿಂದ ತನ್ನ ಸ್ವರೂಪ ಹಾನಿ ಇಲ್ಲದೇ ತಾನೇ ಈ ವಿಚಿತ್ರ ಜಗದಾಕಾರವನ್ನು ಹೊಂದಿರುವನೆಂದೂ ಶ್ರುತಿ ಭಾಷ್ಯಗಳು ಬೋಧಿಸಿರುವುದನ್ನು ನಿರೂಪಿಸಲಾಯಿತು. ಸೃಷ್ಟಿಗೆ ಪೂರ್ವದಲ್ಲಿ ಸದ್ರೂಪನಾದ ಪರಮಾತ್ಮನು ಏಕೋ ದ್ವಿತೀಯ ರೂಪನಾಗಿದ್ದನೆಂದು ಶ್ರುತಿ ಹೇಳಿರುವುದರಿಂದ ಪರಮಾತ್ಮನೇ ಸೃಷ್ಟಿಕರ್ತನೆಂದು ಹೇಳಿರುವದನ್ನು ಅನ್ಯಕಾರಣವನ್ನು ನಿಷೇಧಿಸಿ ನಿರೂಪಿಸಲಾಗಿದೆ ಪರಮಾತ್ಮನು ನಿತ್ಯಶುದ್ಧಬುದ್ಧ ಮುಕ್ತ ಸ್ವರೂಪನೂ ಆಗಿ ಸರ್ವವ್ಯಾಪಿಯಾಗಿರುವನೆಂದೂ ನಿರೂಪಿಸಲಾಗಿದೆ. ಅದರಿಂದಲೇ ಬ್ರಹ್ಮಕ್ಕೆ ಸರ್ವಕಾರಣ ಧರ್ಮಗಳು ಉಪಪನ್ನವದುದೆಂದೂ ಶ್ರುತಿ ಸ್ಮೃತಿ ಭಾಷ್ಯಾಧಾರಗಳಿಂದ ಸಮರ್ಥಿಸಿ ನಿರೂಪಿಸಲಾಗಿದೆ ಬ್ರಹ್ಮವೇದ ಬ್ರಹ್ಮೈವ ಭವತಿ" ಎಂಬ ಶ್ರುತಿ (ಮು: ಭಾ: 3–2–9), ಬ್ರಹ್ಮವನ್ನು ತಿಳಿದವನು ಬ್ರಹ್ಮವೇಯಾಗುತ್ತಾನೆಂದು ಹೇಳುವುದರಿಂದ ಈ ಮೇಲೆ ವಿವರಿಸಿದ ಸರ್ವಶಕ್ತಿ ಸಮನ್ವಿತ ಸತ್ಯಾಜ್ಞಾನಾನಂದ ನಿತ್ಯಪೂರ್ಣನಾಗಿ ಜಗತ್ಕಾರಣನಾದ ಬ್ರಹ್ಮವನ್ನು ಮುಕ್ತನಾಗಲು ಅರಿಯಬೇಕೆಂಬುದೇ ಭಾಷ್ಯ ಸಿಂದ್ಧಾಂವು. ಅನ್ಯ ಸಿದ್ಧಾಂತವಾವುದೂ ಮುಕ್ತಿಹೇತುವಾಗಲಾರದೆಂಬುದನ್ನು ವಿಸ್ಮೃತಿ ಹೊಂದಬಾರದು.

## — 13 (2) ಜಗತ್ತು ಬ್ರಹ್ಮಸ್ವರೂಪವೇ —

ಇದಮಿನಿಸಿ ಕಾಣುತ್ತಿರುವ ಈ ನಾಮರವಪಾತ್ಮಕ ಜಗತ್ತು ಜೀವರಿಗೆ ಭೋಗ್ಯರೂಪವಾಗಿರುವದು. ಇದು ಪಂಚಭವತಾತ್ಮಕವಾಗಿದೆ.

ಈಶ್ವರನಲ್ಲದ ಜೀವನು ನಾಮರೂಪವ್ಯಾಕರಣ ಸಾಮರ್ಥ್ಯವಿಲ್ಲದವನಾದ್ದರಿಂದ ಸರ್ವೋಪನಿಷತ್ತುಗಳೂ ಸರ್ವಜ್ಞನಾದ ಬ್ರಹ್ಮವೇ ನಾಮರೂಗಳ ವ್ಯಾಕರ್ತನೆಂದು ಬೋಧಿಸುತ್ತವೆ ಈ ಜಗತ್ತಿನ ನಿಯತ ಪ್ರವೃತ್ತಿಯಿಂದ ಸರ್ವಜ್ಞ ಸರ್ವಶಕ್ತನಾದ ಪರಮೇಶ್ವರನೊಬ್ಬನಿರುವನೆಂದು ತಿಳಿಯಲು ಸಾಧ್ಯವಾಗಿರುವದು ಅದರಿಂದ ನಾಮರೂಪಾತ್ಮಕ ಜಗತ್ತನ್ನು ಸೃಷ್ಟಿಸಿದೇ ಇದ್ದಿದ್ದರೆ ಪರಮಾತ್ಮನೊಬ್ಬ ನಿರುವನೆಂಬುದು ತಿಳಿಯುವುದಕ್ಕೇ ಆಗುತ್ತಿರಲಿಲ್ಲ ಆದರಿಂದ ವ್ಯಾಖ್ಯಾನವು ಜಗತ್ಕಾರಣವನ್ನು ನಿರಾಕರಿಸಿರುವದು ಜಗತ್ತು ಮಿಥ್ಯಾಭೂತವೆಂದು ನಿರೂಪಿಸಿರುವದು. ಶ್ರುತಹಾನ್ಯ ಶ್ರುತಕಲ್ಪನಾ ಎಂಬ ಪ್ರಬಲದೋಷವು ಇದರಿಂದ ಗುರುಭಾಷ್ಯವನ್ನು ಛಿದ್ರಿಸಿ ಸ್ವಪಕ್ಷವನ್ನು ಸಾಧಿಸಲು ಮಾಡಿರುವ ಪ್ರಯತ್ನವಿದೆಂಬುದು ಸ್ಪಷ್ಟವು. ಈ ವ್ಯಾಖ್ಯಾನವು ಶ್ರುತಿ ಭಾಷ್ಯಾನುಸಾರವಾಗಿಲ್ಲವೆಂಬುದು ನಿಶ್ಚಯವಾಗುತ್ತದೆ.

2 ಜಗತ್ತಿನಲ್ಲಿ ನೋಡಿದರೂ ಸಕಲ ಭೂತಗಳು-ಎಂದರೆ ನರಪಶು ಪಕ್ಷಿ ಕ್ರಿಮಿಕೀಟಾದಿಗಳೂ, ನಾನಾ ವಿಧ ವೃಕ್ಷಲತಾದಿಗಳು-ಹುಟ್ಟುವದಕ್ಕಿಂತ ಮುಂಚೆ ಬೀಜಶಕ್ತಿರೂಪದಿಂದಿದ್ದು ಜನ್ಮಾದಿಗಳನ್ನು ಪಡೆಯುತ್ತವೆಂದು ಕಂಡುಬರುತ್ತದೆ "ಕಥಮಸತಃ ಸಜ್ಜಾಯೇತ" ಎಂಬ ಶ್ರುತಿ (ಛಾಂ ಉ: 6-2-2) ಅಸತ್ತಿನಿಂದ ಸತ್ತು ಹೇಗೆ ಉಂಟಾಗುತ್ತದೆ ? ಎಂದು ಆಕ್ಷೇಪಿಸಿ ಸದ್ರೂಪವಾದ ಬ್ರಹ್ಮವೇ ಜಗಜ್ಜನ್ಮಾದಿಗಳಿಗೆ ಕಾರಣವೆಂದು ಬೋಧಿಸುತ್ತದೆ

3 ಮತ್ತೊಂದು ಶ್ರುತಿ "ತದ್ಧೇದಂತರ್ಹ್ಯವ್ಯಾಕೃತ ಮಾಸೀತ್‌ತನ್ನಾಮ ರೂಪಾಭ್ಯಾಂ ಏವವ್ಯಾಕ್ರಿಯತ" ಎಂಬ ಶ್ರುತಿ (ಬೃ: ಉ 1-4-7) ಇದಮೆನಿಸಿ ಕಾಣುವ ಈ ಜಗತ್ತು ಸೃಷ್ಟಿಗೆ ಮುಂಚೆ ಬೀಜಶಕ್ತಿರೂಪದಿಂದ -ಅವ್ಯಾಕೃತ ರೂಪದಿಂದ - ಬ್ರಹ್ಮಾ ಭಿನ್ನವಾಗಿ ಬ್ರಹ್ಮದಲ್ಲಿತ್ತೆಂದು ಬೋಧಿಸುತ್ತದೆ.

"ಸೂಕ್ಷ್ಮಂತು ತದರ್ಹತ್ವಾತ್" ಎಂಬ ಸೂತ್ರರೀತ್ಯಾ (ಬ್ರ ಸೂ 1-4-2) ಭಾಷ್ಯವು ಇದೇ ಅರ್ಥವನ್ನು ಅನುಸರಿಸಿ ಜಗತ್ತು ಸೃಷ್ಟಿಗೆ ಮುಂಚೆ ನಾಮರೂಗಗಳನ್ನು ತ್ಯಜಿಸಿ ಬೀಜ ಶಕ್ತಿರೂಗವಾಗಿ ಬ್ರಹ್ಮದಲ್ಲಿರುತ್ತದೆಂದು ಬೋಧಿಸುತ್ತದೆ,

ಮತ್ತು "ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ । ಅವ್ಯಕ್ತ ನಿಧನಾನ್ಯೇವ ತತ್ರಕಾ ಪರಿದೇವನಾ?" ಎಂದು (ಗೀ 2-28) ಗೀತೆಯು ಸರ್ವ ಭೂತಗ್ಗಳು ಹುಟ್ಟುವದಕ್ಕಿಂತ ಮುಂಚೆ ಅವ್ಯಕ್ತವಾಗಿ ಬ್ರಹ್ಮನಲ್ಲಿರುತ್ತವೆಂದೂ, ನಿಯತ ಕಾಲಾಂತರ ನಾಮರೂಪಗಳನ್ನು ಬಿಟ್ಟು ಪ್ರಲಯವಾಗಿ ಜಗತ್ತು ಬೀಜ ಶಕ್ತ್ಯವಶೇಷವಾಗಿ ಅವ್ಯಕ್ತವಾಗಿ ಬ್ರಹ್ಮಾಭಿನ್ನವಾಗಿ ಬ್ರಹ್ಮದಲ್ಲಿರುತ್ತದಂದೂ;

"ಧಾತಾ ಯಥಾ ಪೂರ್ವಮ ಕಲ್ಪಯತ್" ಎಂಬ ಶ್ರುತಿ ರೀತ್ಯಾ ಪುನಃ ಅದೇ ಶಕ್ತಿ ಮೂಲಕವಾಗಿ ಜಗತ್ ಸೃಷ್ಟ್ಯಾದಿಗಳಾಗುತ್ತಿರುವವೆಂದೂ ಬೋಧಿಸುತ್ತದೆ ಅನ್ಯಥಾ ಸೃಷ್ಟ್ಯಾದಿಗಳು ಆಕಸ್ಮಿಕವಾಗಿ ಉಂಟಾಗುವವೆಂದು ಹೇಳಬೇಕಾದೀತು. ಅದು ಸಮಂಜಸವಲ್ಲ ವೆಂದಾಗುವದು

ಹೀಗೆ ಜಗತ್ತು ಮೂರು ಕಾಲಗಳಲ್ಲಿಯೂ ಇಲ್ಲನಿಸದೇ ಇರುವವೆಂದಾದ ಮೇಲೆ ಸ್ವದೇಹದಂತೆ ಜಗತ್ತು ಮುಕ್ತಿಗೆ ಸಾಧಕವೇ ಹೊರತು ಬಾಧಕವಲ್ಲ ವೆಂದೂ ನಿಶ್ಚಯಹಾಗುತ್ತದೆ

3 (ಜಗತ್ತು) ಹುಟ್ಟುವದಕ್ಕಿಂತ ಮುಂಚೆ ಕಾರ್ಯವಿರಲಿಲ್ಲವೆಂದರೆ ಉತ್ಪತ್ತಿಗೆ ಕರ್ತೃವಿಲ್ಲವೆಂದಾಗಿ ಕಾರ್ಯಕ್ಕೆ ಯಾವ ರೂಪವೂ ಇಲ್ಲವೆಂದಾಗು ವದು ಸೃಷ್ಟಿ ಅಥವಾ ಉತ್ಪತ್ತಿ ಎಂದರೆ ಕ್ರಿಯೆ ಅದು ಕರ್ತೃವಿಲ್ಲದೆ ಆಗದು ಸೃಷ್ಟಿಗೆ ಮುಂಚೆ ಕಾರ್ಯವಿರಲಿಲ್ಲವೆಂದಾದರೆ ಆಗ ಕರ್ತೃವೇ ಕ್ರಿಯಾರೂಪ ನಾಗುವನೆಂದಾಗುತ್ತದೆ ಮತ್ತು ಕರ್ತೃವೂ ಆಗಿರುತ್ತದೆ ಎಂದು ಹೇಳಿದಂತಾಗುತ್ತದೆ. ಇದು ತನಗೆ ತಾನೇ ವಿರುದ್ಧವೆಂದಾಗುವದು ಆಗ ಮತ್ತೊಂದು ಕರ್ತೃವನ್ನು ಕಲ್ಪಿಸಬೇಕಾಗುವದು ಆಗ ಕಾರಣವೂ ಹುಟ್ಟುವದೆಂದಾಗುವದು

ಲೋಕದಲ್ಲಿ "ಗಡಿಗೆಯ ಉತ್ಪತ್ತಿಗೆ" ಕುಂಬಾರನೇ ಮುಂತಾದ ಕಾರಣಗಳು ಹುಟ್ಟುತ್ತವೆಂದು ತೋರುವದಿಲ್ಲ ಆದರೆ ಕಾರ್ಯವು ಮಾತ್ರವೇ ಹುಟ್ಟಿ ಗಡಿಗೆಯ ರೂಪವು ಸಿದ್ಧವಾಗುವದು ಅದರಿಂದ ಕಾರ್ಯವು ಕಾರಣ ರೂಪ ದಿಂದಲೇ ಕಾರಣದಲ್ಲಿರುತ್ತದೆಂದು ತಿಳಿಯಬೇಕು

4 ಶ್ರುತಿ ಸ್ಮೃತಿಗಳನ್ನನುಸರಿಸಿ ಭಾಷ್ಯವು ಸತ್ ಕಾರ್ಯ ವಾದವನ್ನು

ಸಮರ್ಥಿಸಿ ಅಸತ್ಕಾರ್ಯ ವಾದವನ್ನು ಖಂಡಿಸಿ ಬೋಧಿಸಿರುವದು. ಲೋಕ ದಲ್ಲಿಯೂ ಕಾರ್ಯವು ಹುಟ್ಟುವದಕ್ಕಿಂತ ಮುಂಚೆ ಕಾರಣದಲ್ಲಿ ಕಾರಣ ರೂಪ ದಿಂದಲೇ ಇರುತ್ತದೆಂದು ನಿಶ್ಚಯವಾಗುತ್ತದೆ. ಗಡಿಗೆಯನ್ನು ಮಾಡುವವನು ಮಣ್ಣನ್ನು, ಮೊಸರನ್ನು ಮಾಡುವವನು ಹಾಲನ್ನು ತರುತ್ತಾನೆ ಏಕೆಂದರೆ ಗಡಿಗೆಯಾಗುವ ಅತಿಶಯವು ಮಣ್ಣಿನಲ್ಲಿಯೂ ಮೊಸರಾಗುವ ಅತಿಶಯವು ಹಾಲಿನಲ್ಲಿಯೂ ಇದೆ ಎಂದು ಅರಿತಿರುವದರಿಂದ ಸತ್ಕಾರ್ಯ ವಾದ ಸಿದ್ಧಿಸಿ ತೆಂದೂ, ಅಸತ್ಕಾರ್ಯ ವಾದ ಹಾನಿಯಾಯಿತೆಂದೂ ತಿಳಿಯ ಬೇಕು. ಕಾರ್ಯ ವಾಗುವ ಶಕ್ತಿಯು ಕಾರಣದ ಸ್ವರೂಪವು. ಕಾರ್ಯವು ಶಕ್ತಿ ಸ್ವರೂಪವು ಎಂದು ನಿಶ್ಚಯವಾಯಿತು.

ಇದಲ್ಲದೆ ಕಾರ್ಯ ಕಾರಣಗಳಿಗೂ ದ್ರವ್ಯ ಗುಣಾದಿಗಳಿಗೂ ಕುದುರೆ ಕೋಣಗಳಂತೆ ಭೇದ ಬುದ್ಧಿ ಉಂಟಾಗುವದಿಲ್ಲ ಆದರಿಂದ ಕಾರ್ಯ ಕಾರಣ ಗಳಿಗೂ ದ್ರವ್ಯ ಗುಣಾದಿಗಳಿಗೂ ತಾದಾತ್ಮ್ಯವನ್ನು ಒಪ್ಪಬೇಕು ಶಕ್ತಿ ಶಕ್ತರಿಗೆ ಭೇದವಿಲ್ಲೆಂಬ ನ್ಯಾಯವನ್ನಿಲ್ಲಿ ಒಪ್ಪಿದೆ ಆದರೆ ವ್ಯಾಖ್ಯಾನವು ಈ ಕಾರ್ಯ ಕಾರಣ ಭಾವವನ್ನು (ಜಗತ್ತು ಬ್ರಹ್ಮರಿಗೆ) ಬೋಧಿಸಿರುವ ಭಾಷ್ಯವನ್ನು ಧಿಕ್ಕರಿಸಿ ಜಗನ್ಮಿಥ್ಯಾ ವಾದವನ್ನು ಮುಂದೊಡ್ಡಿರುವದರಿಂದ ಈ ವ್ಯಾಖ್ಯಾನವು ಭಾಷ್ಯ ವಿರುದ್ಧವು. ವ್ಯಾಖ್ಯಾನವು ಭಾಷ್ಯವನ್ನು ಅನುಸರಿಸಿಲ್ಲವೆಂಬುದು ಸ್ಪಷ್ಟವು.

5 ಇಡಿಯ ಜಗತ್ತು ಬ್ರಹ್ಮದ ಕಾರ್ಯವು. ಕಾರ್ಯಕಾರಣಗಳನನ್ಯವು. ಅನ್ಯಥಾ "ಯಾವ ಆದೇಶದಿಂದ ಕೇಳದೇ ಇದ್ದದ್ದು ಕೇಳಿದ್ದಾಗುವದೊ ಮನನ ಮಾಡದೇ ಇದ್ದದ್ದು ಮನನ ಮಾಡಿದ್ದಾಗುವದೋ, ಅರಿಯದೇ ಇದ್ದದ್ದು ಅರಿತದ್ದಾಗುವದೋ" ಎಂಬೀ ಶ್ರುತಿ ಪ್ರತಿಜ್ಞೆಯು ಭಂಗವಾಗು ವದು. ಇದನ್ನು ಅನುಸರಿಸಿಲ್ಲವಾದ್ದರಿಂದ ವ್ಯಾಖ್ಯಾನವು ಭಾಷ್ಯ ವಿರುದ್ಧವು.

ಶಂ —ಕಾರ್ಯ ಕಾರಣ ಭಾವವನ್ನು ಒಪ್ಪಿದರೆ ಬ್ರಹ್ಮವು ಜಗದಾ ಕಾರವನ್ನು ಹೊಂದಿದನೆಂದಾಗಿ ಬ್ರಹ್ಮವೇ ಇಲ್ಲವೆಂದಾಗುವದಿಲ್ಲವೇ ? ಎಂದರೆ

ಸಮಾಧಾನ —ಈ ದೋಷ ಪ್ರಸಕ್ತಿಯೇ ಇಲ್ಲ. ಹೇಗೆಂದರೆ, ಹೇಗೆ

ಬ್ರಹ್ಮವು ಜಗದುತ್ಪತ್ತಿಯನ್ನು ಮಾಡುವನೆಂದು ಶ್ರುತಿಗಳು ಹೇಳುತ್ತವೆಯೋ, ಹಾಗೆಯೇ ವಿಕಾರಕ್ಕಿಂತ ಬೇರೆಯಾಗಿ ಬ್ರಹ್ಮವು ನಿರ್ವಿಕಾರವಾಗಿರುತ್ತದೆಂದು ಹೇಳುವ ಶ್ರುತಿಯೂ ಇದೆ. ಜಗತ್ತೆಲ್ಲವೂ ಪ್ರಕೃತಿಯ ವಿಕಾರವು ಎಂದು ಶ್ರುತಿಯು ಅದನ್ನು ಬೇರೆಯಾಗಿಯೇ ತಿಳಿಸಿರುತ್ತದೆ. (ಛಾಂ: ಉ 3-12-6) ಆದರಿಂದ ಕಾರ್ಯ ಕಾರಣಗಳನನ್ಯವು

7 "ಆತ್ಮ ನಿ ಚೈವಂ ವಿಚಿತ್ರಾಶ್ಚಹಿ" ಎಂಬ ಸೂತ್ರ ರೀತ್ಯಾ (ಬ್ರ ಸೂ: 2–1–28) ಭಾಷ್ಯವು ಒಂದೇ ಬ್ರಹ್ಮವು ತನ್ನ ಸ್ವರೂಪ ಹಾನಿ ಇಲ್ಲದೇ ಈ ಜಗದಾಕಾರವನ್ನು ಹೊಂದುವನೆಂದೂ, ಅದನ್ನು ವಿವಾದ ಮಾಡ ಬಾರದೆಂದೂ. ಕನಸಿನಲ್ಲಿ ಆತ್ಮನು ರಥಗಳು ಕುದುರೆಗಳು, ದಾರಿಗಳು ಇಲ್ಲ ದಿದ್ದರೂ ಅವುಗಳೆಲ್ಲವನು ಸೃಜಿಸಿ ಕೊಳ್ಳುವನೆಂಧು ಬೋಧಿಸುತ್ತದೆ. ಹೀಗಿರು ವಾಗ ಸರ್ವಜ್ಞೇಶ್ವರನಾದ ಬ್ರಹ್ಮವು ತನ್ನ ಸ್ವರೂಪ ಹಾನಿ ಇಲ್ಲದೆ ಈ ಸೃಷ್ಟ್ಯಾದಿಗಳನ್ನು ಮಾಡುವನೆಂಬುದನ್ನು ಹೇಳುವದೇನಿದೆ?

8 ಈ ಜಗತ್ತೆಲ್ಲವು ಈಶ್ವರಾಧೀನವು. ಪರಮಾತ್ಮನು ನಿತ್ಯ ನಿರತಿ ಶಯ ಜ್ಞಾನ ಶಕ್ತ್ಯಾಪಾಧಿ ಸಂಪನ್ನನಾದ್ದರಿಂದ ಅವಿದ್ಯೋಪಾಧಿಯಿಂದಿರುವ ಜೀವರನ್ನಾಳುವನೆಂಬುದು ಯುಕ್ತವೇ ಆಗಿದೆ. ("ಭೀಷಾಸ್ಮಾದ್ವಾತಃ ಪವತೇ। ಭೀಷೋದೇತಿ ಸೂರ್ಯಃ॥ ಎಂದು ಶ್ರುತಿ. (ಬ್ರ: ಸೂ. 2–3–45) ಜಗನ್ಮಿಥ್ಯಾ ವಾದದಲ್ಲಿ ಈ ಶ್ರುತಿ ವ್ಯರ್ಥವು.

9 ಜಗತ್ತು ಬ್ರಹ್ಮದಲ್ಲಿದ್ದು (ಅವ್ಯಕ್ತವಾಗಿ) ಬ್ರಹ್ಮದಿಂದಲಿ ಸೃಷ್ಟಿಸಲ್ಪಟ್ಟು, ಸ್ಥಿತಿಯುಳ್ಳದ್ದಾಗಿ, ಬ್ರಹ್ಮದಿಂದಲೇ ಲಯವಾಗಿ ತಾದಾತ್ಮ್ಯವನ್ನು ಹೊಂದಿ ಬ್ರಹ್ಮರೂಪದಿಂದಲೇ ಇರುವದರಿಂದ ಜಗತ್ತು ಬ್ರಹ್ಮಸ್ವರೂಪವೇ ಎಂದಾಯಿತು

"ಬ್ರಹ್ಮೈವೇದಂ ಸರ್ವಂ" ಎಂಬ ಶ್ರುತಿ ಇದಮೆನಿಸಿ ಕಾಣುತ್ತಿರುವ ಜಗತ್ತೆಲ್ಲವು ಬ್ರಹ್ಮವೆಂದು ಬೋಧಿಸುತ್ತದೆ.

"ಬ್ರಹ್ಮಾರ್ಪಣಂ ಬ್ರಹ್ಮ ಹವಿ ಬ್ರಹ್ಮಾಗ್ನೌ ಬ್ರಹ್ಮಣಾಹುತಂ। ಬ್ರಹ್ಮೈವತೇನಗಂತವ್ಯಂ ಬ್ರಹ್ಮಕರ್ಮಸಮಾಧಿನಾ" ಎಂದು ಗೀತೆ ಸರ್ವವು ಬ್ರಹ್ಮಸ್ವರೂಪವೆಂದೇ ಬೋಧಿಸುತ್ತವೆ. (ಗೀ ಅ 4–24)

ಹೀಗೆ ಕಾರ್ಯವಾಗುತ್ತಿರುವ ಶಕ್ತಿಯು ಕಾರಣಸ್ವರೂಪವೇ ಕಾರ್ಯವು ಶಕ್ತಿಸ್ವರೂಪವೇ, ಈ ಸಿದ್ಧಾಂತವನ್ನೇ ಆಧುನಿಕ ವೈಜ್ಞಾನಗಳು ಶೋಧನಾಪೂರ್ವಕವಾಗಿ ಶಕ್ತಿಯೇ ಜಗದ್ರೂಪವಾಗಿರುವದೆಂದೂ, ಮತ್ತೆ ಯಾ ಜಗತ್ತು ಶಕ್ತಿರೂಪವಾಗಿರುವದೆಂದೂ, ನಿರ್ಣಯಿಸಿ ಸಮರ್ಥಿಸಿರುವರು (Energy is matter, and matter is energy and they are mutually convertible, but energy is constant ಎಂದು ಹೇಳುತ್ತಾರೆ

ಹೀಗಿರುವಾಗ ಜಗತ್ತು ಮಿಥ್ಯಾಭೂತವೇ ? ಅವಿದ್ಯಾಕಲ್ಪಿತವೇ ? ಜ್ಞಾನ ಬಾಧ್ಯವೇ ? ಶಕ್ತಿಯು ಅವಿದ್ಯೆಯು ಪರ್ಯಾಯ ಪದಗಳೇ ? ಈ ವ್ಯಾಖ್ಯಾನವು ಭಾಷ್ಯಸಮ್ಮತವೇ ?

ಆದರಿಂದ ಜಗತ್ತೂ ಬ್ರಹ್ಮಸ್ವರೂಪವೇ ಎಂದು ನಿಶ್ಚಯಿಸಬೇಕು. ಜಗತ್ತು ಬ್ರಹ್ಮಕ್ಕೆ ಭಿನ್ನವಲ್ಲ ಆದರಿಂದ ಸರ್ವವು ಬ್ರಹ್ಮಸ್ವರೂಪವೆಂದರಿಯಬೇಕು.

10 ಆತ್ಮನು ಕೇವಲ ತಾನೇ ತಾನಾಗಿರುವುದು ಸ್ವಾಭಾವಿಕವು ಕೇವಲ ಶಬ್ದವು ಬರಿಯ ಅನುವಾದ ಮಾತ್ರವು ಆತ್ಮನು ಸಹಜವಾಗಿಯೇ ನಿರ್ವಿಶೇಷನಾಗಿ ಅಸಂಗಚಿದ್ರೂಪನಾಗಿ ನಿರ್ವಿಕಾರನಾಗಿರುವನೆಂಬುದು ಶ್ರುತಿ ಸ್ಮೃತಿ ನ್ಯಾಯಗಳಿಂದ ಸುಪ್ರಸಿದ್ಧವಾಗಿರುವದೆಂದು ಗೀತೆಯು ಬೋಧಿಸುತ್ತದೆ

(ಅತಃ ಕೇವಲತ್ವಂ ಆತ್ಮನಃ ಸ್ವಾಭಾವಿಕಂ ಇತಿ 'ಕೇವಲ' ಶಬ್ದಃ ಅನುವಾದ ಮಾತ್ರಂ। ಅವಿಕ್ರಿಯತ್ವಂಚ ಆತ್ಮನಃ ಶ್ರುತಿಸ್ಮೃತಿ ನ್ಯಾಯ ಪ್ರಸಿದ್ಧಂ॥ ಎಂದು ಗೀತಾ ಭಾಷ್ಯ. (ಗೀ: 18–17)

11 ಮತ್ತು "ದ್ಯುಭ್ವಾದ್ಯಾಯತನಂ ಸ್ವಶಬ್ದಾತ್" ಎಂಬ ಸೂತ್ರ

ರೀತ್ಯಾ (ಬ್ರ· ಸೂ· 1-3-1) ಆತ್ಮನು ಕಾರ್ಯ ಪ್ರಪಂಚದಿಂದ ಕೂಡಿಕೊಂಡು ವಿಚಿತ್ರವಾಗಿರುವನೆಂದು ಆತ್ಮನನ್ನು ಅರಿಯಬಾರದೆಂದೂ, ಮತ್ತೇನೆಂದರೆ ಅವಿದ್ಯಾಕೃತ· ಕಾರ್ಯ ಪ್ರಪಂಚವನ್ನು ವಿದ್ಯೆಯಿಂದ ಪ್ರವಿಲಯಮಾಡಿ ಆಯತನವಾಗಿರುವ ಆತ್ಮನೊಬ್ಬನನ್ನೇ ಏಕರಸನೆಂದು ಅರಿಯಬೇಕೆಂದು ಭಾಷ್ಯವು ಬೋಧಿಸುತ್ತಿಹುದು. (ತಮೇವೈಕಂ ಜಾನಥ ಆತ್ಮಾನಂ॥ ಎಂದು ಶ್ರುತಿ. (ಮು· ಉ 2-2-5).

ಅದರಿಂದ ಇಡಿಯ ಜಗತ್ತು ಸೃಷ್ಟಿಗೆ ಮುಂಚೆ ಅವ್ಯಕ್ತವಾಗಿ ಬ್ರಹ್ಮಾಭಿನ್ನವಾಗಿ ಬ್ರಹ್ಮನಲ್ಲಿತ್ತೆಂದೂ. ಬ್ರಹ್ಮವು ತನ್ನ ಮಾಯಾಶಕ್ತಿಯಿಂದ ಅದನ್ನು ನಾಮರೂಪಾತ್ಮಕವಾಗಿ ಈ ಜಗದಾಕಾರವಾಗಿ ತನ್ನ ಸ್ವರೂಪ ಹಾನಿ ಇಲ್ಲದೆ ಸೃಜಿಸಿರುವನೆಂದೂ, ಅಥವಾ ಆತ್ಮನು ಸ್ವಪ್ನದಲ್ಲಿ ತನ್ನ ಸ್ವರೂಪ ಹಾನಿ ಇಲ್ಲದೆ ಈ ಜಗದಾಕಾರವಾಗುವಂತೆ ಪರಮಾತ್ಮನು ತಾನೇ ಮಾಯಾವಿಯಂತೆ ತನ್ನ ಸ್ವರೂಪ ಹಾನಿ ಇಲ್ಲದ ಈ ಜಗದಾಕಾರವನ್ನು ಹೊಂದಿರುವನೆಂದೂ, ಹೇಳಿ ಆದರ ಸ್ಥಿತಿ ಕಾಲವನ್ನು ನಿಯಮಿಸಿ ನಿಯತ ಸ್ಥಿತಿ ಕಾಲದಲ್ಲಿಯೂ ಪರಮಾತ್ಮನಿಗೆ ಅನನ್ಯವಾಗಿದ್ದುಕೊಂಡು, ನಿಯತ ಕಾಲಾನಂತರ ನಾಮರೂಪಗಳನ್ನು ಬಿಟ್ಟು ಪ್ರಳಯವಾಗಿ ಬ್ರಹ್ಮದಲ್ಲಿ ಸೇರಿ ಶಕ್ತ್ಯವಶೇಷವಾಗಿ ಉಳಿದುಕೊಂಡು ಹಿಂದಿನಂತೆಯೇ ಅವ್ಯಕ್ತವಾಗಿ ತಾದಾತ್ಮ್ಯವನ್ನು ಹೊಂದಿ ಐಕ್ಯವಾಗುವದು. ಪುನಃ ಅದೇ ಶಕ್ತಿಮೂಲಕವಾಗಿ ಸೃಷ್ಟ್ಯಾದಿಗಳು ಇದೇ ಕ್ರಮದಿಂದ ಆಗುತ್ತಿರುವವೆಂದೂ ಭಾಷ್ಯವು ಬೋಧಿಸುತ್ತಿಹುದು.

ಅದರಿಂದ ಜಗತ್ತು ಬ್ರಹ್ಮಕಾರ್ಯವೆಂದೂ, ಬ್ರಹ್ಮವು ಕಾರಣವೆಂದೂ, ಕಾರ್ಯಕಾರಣಗಳನನ್ಯವೆಂದೂ, ವಾಚಾರಂಭಣ ಶ್ರುತಿ ರೀತ್ಯಾ ಕಾರ್ಯವು ಅನೃತವೆಂದೂ, ಆದರೆ ಕಾರ್ಯಕಾರಣಗಳಿಗೆ ಸತ್ತ್ವವು ಒಂದೇ ಎಂದೂ ಕಾರ್ಯವು ವಿಲಕ್ಷಣವಾದರೂ ಸಿದ್ಧಾಂತ ಹಾನಿ ಇಲ್ಲವೆಂದೂ ಜಗತ್ತು ಬ್ರಹ್ಮಸ್ವರೂಪವೇ ಎಂದೂ ಅದರಿಂದ ಬ್ರಹ್ಮ ಜಗತ್ತುಗಳಿಗೆ ಕಾರ್ಯ ಕಾರಣಭಾವದಿಂದ ಏಕತ್ವವನ್ನು ಸಮರ್ಥಿಸಿ ಬ್ರಹ್ಮವು ಏಕೋಽದ್ವಿತೀಯವೆಂದು ಭಾಷ್ಯವು ಬೋಧಿಸುತ್ತಿಹುದು. ಕಾರ್ಯವು ಕಾರಣಕ್ಕಿಂತ ಬೇರೆ ಎಂದೂ

ಶತ ವರ್ಷಗಳು ತರ್ಕಿಸಿದರೂ ಸಾಧ್ಯವಿಲ್ಲವೆಂದು ಬೋಧಿಸಿರುವದನ್ನು ವಿಸ್ಮೃತಿ ಹೊಂದಬಾರದು

## —13 (3) ಜೀವನು ಬ್ರಹ್ಮ ಸ್ವರೂಪನು —

ಶ್ರುತಿಗಳೆಲ್ಲಾ ಅದ್ವೈತದಲ್ಲಿಯೇ ತಾತ್ಪರ್ಯವೆಂಬುದನ್ನು ತಿಳಿಸಿದ್ದಾಯಿತು ಸೃಷ್ಟಿಗೆ ಪೂರ್ವದಲ್ಲಿ ಶ್ರುತಿಯು ಪರಮಾತ್ಮನು ಸದ್ರೂಪನಾಗಿ ಏಕೋಽದ್ವಿತೀಯನಾಗಿ (ಎರಡನೆಯದೆಂಬುದಿಲ್ಲದೆ) ತಾನೊಬ್ಬನೇ ಇದ್ದನೆಂದು ಬೋಧಿಸುತ್ತದೆಂದು ತಿಳಿಸಲಾಯಿತು ಮತ್ತು ಅವನು ಸತ್ಯಜ್ಞಾನಾನಂತ ಸ್ವರೂಪನಾಗಿ ನಿರಾಕಾರನಾದ್ದರಿಂದ ಸರ್ವವ್ಯಾಪಿಯಾಗಿ, ಅಸಂಸಾರಿಯೇದಾಗಿ ನಿತ್ಯನೆನಿಸಿ ಅವಿನಾಶಿಯಾಗಿ ಸಹಜಾನಂದರೂಪನೆಂದು ತಿಳಿಸಲಾಯಿತು ಆದರಿಂದ ಅವನೇ ಜಗತ್ ಕರ್ತನೆಂದು ತಿಳಿಸಲಾಯಿತು ಜಗತ್ತಿನ ಸೃಷ್ಟ್ಯಾದಿಗಳನ್ನು ಅವನೇ ನಿರ್ವಹಿಸಿರುವದರಿಂದ ಅವನು ಸರ್ವಜ್ಞನೂ ಸರ್ವಶಕ್ತನೂಯೆಂದೂ ನಿತ್ಯಶುದ್ಧಬುದ್ಧ ಮುಕ್ತನೆಂದೂ ನಿರ್ಣಯಿಸಿ ನಿರೂಪಿಸಲಾಯಿತು ಪರಮಾತ್ಮನಿಗೆ ಸಮನೂ ಅಧಿಕನೂ ಯಾರೂ ಇಲ್ಲ, ಸತ್ಯಜ್ಞಾನಾನಂತ ಸ್ವರೂಪನವನೊಬ್ಬನೇ ಅದರಿಂದ ಪರಮಾತ್ಮನೇ ಏಕೋಽದ್ವಿತೀಯನೆಂದು ಸಮರ್ಥಿಸಿ ನಿರೂಪಿಸಲಾಯಿತು

"ತದ್ಧೇದಂತರ್ಹಿ ಅವ್ಯಾಕೃತಮಾಸೀತ್" ಎಂಬ ಶ್ರುತಿ ರೀತ್ಯಾ ಜಗತ್ತುನಾಮರೂಪಗಳನ್ನು ಬಿಟ್ಟು ಬೀಜ ಶಕ್ತಿರೂಪವಾಗಿ ಅವ್ಯಕ್ತವಾಗಿ ಬ್ರಹ್ಮಾಭಿನ್ನವಾಗಿ ಇತ್ತೆಂದೂ, ಜಗತ್ತಿನಸೃಷ್ಟ್ಯಾದಿಗಳು ಪರಮೇಶ್ವರಾಧೀನ-ವೆಂದೂ, ಜಗತ್ತು ಪರಮಾತ್ಮನಿಗೆ ಭಿನ್ನವಲ್ಲವೆಂದೂ, ಸೃಷ್ಟ್ಯಾದಿಗಳು ಅವನ ಲೀಲೆಯೆಂದೂ ಆದರಿಂದ ದಿವ್ಯವಾದ ಅದ್ವೈತ ಸಿದ್ಧಾಂತಹಾನಿ ಇಲ್ಲವೆಂದೂ, ಬ್ರಹ್ಮವು ಅಪ್ರತಿಬದ್ಧ ಶಕ್ತಿ ಸ್ವರೂಪವೆಂದೂ, ಆದರಿಂದ ಅವನು ಏಕೋಽ-ದ್ವಿತೀಯನೆಂದೂ ಸಮರ್ಥಿಸಿ ನಿರೂಪಿಸಲಾಗಿದೆ

## — ಜೀವನೆಂಬುವನು ಯಾರು —

1. ಜೀವನಿಗೆ ಶಾಸ್ತ್ರದಲ್ಲಿ ಸೃಷ್ಟಿಯನ್ನು ಹೇಳಿರುವುದಿಲ್ಲ ಜೀವನು

ಹುಟ್ಟುತ್ತಾನೆಂದರೆ ಅವನಿಗೆ ಮರಣವೂ ಉಂಟಾಗುತ್ತದೆಂದು ಅಂಗೀಕರಿಸ ಬೇಕಾಗುತ್ತದೆ. (ಜಾತಸ್ಯಹಿ ಧ್ರುವೋಮೃತ್ಯುಃ ॥ ಎಂದು ಗೀತೆ.) ಆದರಿಂದ ಜೀವನಿಗೆ ಜನ್ಮವನ್ನು ಅಂಗೀಕರಿಸಬಾರದು

ಪ್ರತ್ಯಕ್ಷವಾಗಿ ಸಂಸಾರಿಯೆನಿಸಿ ದೇಹದ ಪ್ರಾರಬ್ಧಾನುಗುಣ್ಯವಾಗಿ ಸುಖ ದುಃಖಗಳನ್ನು ಅನುಭವಿಸುತ್ತಿರುವವನು ಒಬ್ಬನು ಇರಲು ಜೀವನೇ ಇಲ್ಲ ವೆನಬಾರದು ಜೀವನು ಅನಾದಿ ಎಂದರೆ ಸೃಷ್ಟಿಗೆ ಪೂರ್ವದಲ್ಲಿ ಪರಮಾತ್ಮ ನೊಬ್ಬನೇ ಎರಡನೆಯದಿಲ್ಲದೆ ಇದ್ದನೆಂದು ಹೇಳುವ ಶ್ರುತಿವಿರುದ್ಧವಾಗುವದು.

2 ಯಾವ ಸರ್ವಜ್ಞನೂ ಸರ್ವಶಕ್ತನೂ ಆದ ಸರ್ವೇಶ್ವರನು ಜಗತ್ಸೃಷ್ಟ್ಯಾದಿಗಳಿಗೆ ಕಾರಣನೆಂದು ಒಂದು ಉಪನಿಷತ್ತಿನಲ್ಲಿ ಹೇಳಲ್ಪಟ್ಟಿರುವದೋ ಹಾಗೆಯೇ ಉಳಿದ ಉಪನಿಷತ್ತುಗಳಲ್ಲಿಯೂ ಹೇಳಿರುವದು. "ಸತ್ಯಂ ಜ್ಞಾನ ಮನಂತಂ ಬ್ರಹ್ಮ" ಎಂಬಶ್ರುತಿ "ಜ್ಞಾನ" ಶಬ್ದದಿಂದ ಜಗತ್ಕಾರಣವಾದ ಚೈತನ್ಯವೆಂದು ತಿಳಿಸುತ್ತದೆ ಅನ್ಯರಿಂದ ಪ್ರೇರಿತನಾಗಿ ಸೃಷ್ಟ್ಯಾದಿಗಳನ್ನು ಮಾಡಿರುವದರಿಂದ ಬ್ರಹ್ಮವೇ ಈಶ್ವರನೆಂದು ಹೇಳಿದೆ, "ಆತ್ಮಾನಗ್ಂ ಸ್ವಯ ಮಕುರುತ" ಎಂಬ ಶ್ರುತಿ ಆತ್ಮಶಬ್ದ ಪ್ರಯೋಗದಿಂದ ಆತ್ಮನೇ ಬ್ರಹ್ಮವೆಂದೂ, ತನ್ನ ಸ್ವರೂಪಹಾನಿ ಇಲ್ಲದೆ ಬ್ರಹ್ಮವೇ ತನ್ನ ಮಾಯಾಶಕ್ತಿಯಿಂದ ಈ ಜಗದಾ ಕಾರನು ಹೊಂದಿರುವನೆಂದೂ ಅದೇ ಶ್ರುತಿ "ತದ್ಬ್ರಹ್ಮಸ ಆತ್ಮಾ" ಎಂದು ಆತ್ಮನೆಂದರೂ ಬ್ರಹ್ಮವೆಂದರೂ ಒಂದೇ ಎಂದು ನಿಶ್ಚಯಮಾಡಿ ಬೋಧಿಸುತ್ತದೆ ಮತ್ತು "ಬಹುಸ್ಯಾಂಪ್ರಜಾಯೇಯೇತಿ" ಎಂಬ ಶ್ರುತಿರೀತ್ಯಾನಾನು ಬಹು ವಾಗುವೆನು ಎಂದು ಹೇಳಿರುವುದರಿಂದ ಸೃಷ್ಟಿ ಮುಂತಾದ ಕಾರ್ಯಗಳು ಸ್ರಷ್ಟೃ ವಿಗಿಂತ ಬೇರೆ ಅಲ್ಲವೆಂದು ತಿಳಿಸುತ್ತವೆ. ಸಮಸ್ತ ಜಗತ್ತನ್ನು ಸೃಷ್ಟಿಸಿರುವದರಿಂದ ಸೃಷ್ಟಿಕರ್ತನಾದ ಬ್ರಹ್ಮವು ಸೃಷ್ಟಿಗೆ ಪೂರ್ವದಲ್ಲಿ ಏಕೋಽದ್ವಿತೀಯನಾಗಿದ್ದ ನೆಂದು ನಿಶ್ಚಯವಾಗುತ್ತದೆ. "ಬ್ರಹ್ಮವಿದಾಪ್ನೋತಿಪರಂ" ಎಂಬ ಶ್ರುತಿ ಬ್ರಹ್ಮನನ್ನು ತಿಳಿದವನು ಮುಕ್ತನಾಗುತ್ತಾನೆಂದು ಹೇಳಿರುವದರಿಂದಲೂ, ಬ್ರಹ್ಮವು "ಬಹುಸ್ಯಾಂ ಪ್ರಜಾಯೇಯ" ಎಂಬ ಶ್ರುತಿರೀತ್ಯಾತಾನೇ ಬಹು ವಾಗುವೆನೆಂದು ಹೇಳಿರುವದರಿಂದಲೂ (ಅನೇಕ ಆತ್ಮರಾಗುವೆನೆಂದು) "ಬ್ರಹ್ಮ ವೇದಬ್ರಹ್ಮೈವಭವತಿ" ಎಂಬ ಶ್ರುತಿ ಬ್ರಹ್ಮವನ್ನು ತಿಳಿದವನು ಬ್ರಹ್ಮವೇ

ಯಾಗುತ್ತಾನೆಂದು ಹೇಳಿರುವದರಿಂದಲೂ, "ಬ್ರಹ್ಮೈವಸನ್ ಬ್ರಹ್ಮಾಪ್ಯೇತಿ" ಎಂಬ ಶ್ರುತಿ ಬ್ರಹ್ಮವೇ ತಾನಾಗಿರಲಾಗಿ ಬ್ರಹ್ಮವನ್ನು ಹೊಂದುತ್ತಾನೆಂದು ಹೇಳಿರುವದರಿಂದಲೂ, "ಇದಗ್ಂ ಸರ್ವಮಸೃಜತ । ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್" ॥ ಎಂಬ ಶ್ರುತಿ ಬ್ರಹ್ಮ ಇದನ್ನಾಗಿರುವದೆಲ್ಲವನ್ನು ಸೃಜಿಸಿದನೆಂದೂ, ಸೃಜಿಸಲ್ಪಟ್ಟ ಸಕಲ ಶರೀರಗಳಲ್ಲಿಯೂ ತಾನೇ ಅನುಪ್ರವೇಶ ಮಾಡಿರುವನೆಂದು ಹೇಳಿರುವದರಿಂದಲೂ, ಮತ್ತೊಂದು ಶ್ರುತಿಯು "ಅನೇನ ಜೀವೇನಾತ್ಮನಾನು ಪ್ರವಿಶ್ಯ" ಎಂದು ಶ್ರುತಿ ನಾನು ಈ ಜೀವನೆಂಬ ಆತ್ಮನ ರೂಪದಿಂದ ಅನುಪ್ರವೇಶಮಾಡಿ ಎಂದು ಸ್ಪಷ್ಟವಾಗಿಯೇ ಪರಮಾತ್ಮನೇ ಈ ಜೀವರೂಪ ದಿಂದಿರುವನೆಂದೂ, "ಅಯಮಾತ್ಮಾಬ್ರಹ್ಮ, ತತ್ತ್ವಮಸಿ, ನಾನ್ಯೋಽತೋಽಸ್ತಿ ದ್ರಷ್ಟಾ, ಶ್ರೋತಾ, ಮಂತಾ ವಿಜ್ಞಾತಾ" ಎಂಬ ಶ್ರುತಿಗಳು ಈ ಜೀವ ರೂಪದಿಂದ ಈ ಶರೀರದಲ್ಲಿದ್ದು ವ್ಯವಹರಿಸುತ್ತಿರುವವನು ಆ ಜಗತ್ಕಾರಣ ನಾದ ಸರ್ವೇಶ್ವರನೇ ಎಂದು ಬೋಧಿಸುತ್ತಿರುವದರಿಂದ ಪರಮಾತ್ಮನೇ ಅವಿದ್ಯೋಪಾಧಿಯಿಂದ ಜೀವನೆನಿಸಿ ವ್ಯವಹರಿಸುತ್ತಿರುವನೆಂದಾಯಿತು, ಪ್ರತಿಯೊಬ್ಬ ಜೀವನೂ ಯಾವಾಗಲೂ ನೋಡುತ್ತಾ, ಕೇಳುತ್ತಾ, ಆಲೋಚಿ ಸುತ್ತಾ, ಅರಿಯುತ್ತಾ ವ್ಯವಹರಿಸುತ್ತಿರುವನು ಹಾಗಿಲ್ಲದಿದ್ದರೆ ವ್ಯವಹಾರವೇ ಆಗುವ ಹಾಗಿಲ್ಲವೆಂದು ಭಾಷ್ಯ ಬೋಧಿಸುತ್ತಿವೆ ದು (ಬ್ರ ಸೂ 1–3–19) (ಸರ್ವೋಹಿಜೀವಃ ಪಶ್ಯಞ್ಶೃಣ್ವನ್, ಮನ್ವಾನೋ ವಿಜಾನನ್ ವ್ಯವಹರತಿ । ಅನ್ಯಥಾ ವ್ಯವಹರಾನುಪಪತ್ತೇಃ ॥ ಎಂದು ಭಾಷ್ಯ ) ಆದರಿಂದ ಸೃಷ್ಟ್ಯಾದಿಕರ್ತ ನಾದ ಪರಮಾತ್ಮನೇ ಜೀವಭಾವದಿಂದ ಈ ಶರೀರದಲ್ಲಿ ವಿಜ್ಞಾನಾತ್ಮನೆನಿಸಿ ಅಥವಾ ಜೀವನೆನಿಸಿ ವ್ಯವಹರಿಸುತ್ತಿರುವನೆಂದಾಯಿತು

3 ಮತ್ತು "ಯೋವೇದನಿಹಿತಂಗುಹಾಯಾಂ" ಎಂಬ ಶ್ರುತಿ (ತೈ ಉ 2–1) ಸತ್ಯಜ್ಞಾನಾನಂತ ಸ್ವರೂಪ ಬ್ರಹ್ಮವು ಗುಹೆಯಲ್ಲಿ ನಿಹಿತವಾಗಿರುವುದನ್ನು ಯಾವನರಿಯುವನೋ ಎಂದು ಹೇಳಿರುವುದರಿಂದ ಬ್ರಹ್ಮಕ್ಕಿಂತ ಬೇರೆ ಇನ್ನಾವನೂ ಗುಹೆಯಲ್ಲಿ ನಿಹಿತವಾಗಿರಲಾರನೆಂದೂ, ಇದೆಲ್ಲವನ್ನು ಸೃಷ್ಟಿಸಿ ಅವನೇ ಇದರೊಳು ಅನುಪ್ರವೇಶಿಸಿರುವನೆಂದೂ ಶ್ರುತಿಯಲ್ಲಿದೆ ಅನ್ಯಥಾಮೋಕ್ಷದ್ವಾರವೇ ಬಾಧಿತವಾಗುತ್ತದೆಂದರಿಯಬೇಕು ಆದರಿಂದ ಈ ಅನುಪ್ರವೇಶವು ಪರಮಾತ್ಮನದೇ

4 "ಹೃದಿಏಷ ಆತ್ಮಾ" ಎಂಬ ಶ್ರುತಿ (ಪ್ರ 3-6) ಈ ಆತ್ಮನು ಹೃದಯದಲ್ಲಿರುವನೆಂದು ಹೇಳಿರುವದರಿಂದ ಈ ಅನುಪ್ರವೇಶವು ಪರಮಾತ್ಮನದೇ ಅನ್ಯರಿಗಾರಿಗೂ ಈ ಅನುಪ್ರವೇಶವು ಶಕ್ಯವಿಲ್ಲ. "ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ" ಎಂದು ಗೀತೆಯು (ಅ 18-61) ಈಶ್ವರನು ಸರ್ವಭೂತಗಳ ಹೃದಯದಲ್ಲಿ ನೆಲಸಿರುತ್ತಾನೆಂದು ಬೋಧಿಸಿರುತ್ತದೆ.

5 "ದ್ವಾಸುಪರ್ಣಾ" ಎಂಬ ಶ್ರುತಿ ಸದಾ ಜೊತೆಯಲ್ಲಿ ಸಖರಾಗಿ ಸಮಾನರಾಗಿ ಒಂದೇ ವೃಕ್ಷವನ್ನಾಶ್ರಯಿಸಿರುವ ಎರಡು ಪಕ್ಷಿಗಳಂತೆ ಒಂದೇ ಶರೀರಾಶ್ರಯದಲ್ಲಿ ಒಬ್ಬನು ಕರ್ಮಫಲವನ್ನು ಅನುಭವಿಸುತ್ತಿರುವನೆಂದೂ ಮತ್ತೊಬ್ಬನು ತಿನ್ನದೆ ನೋಡುತ್ತಿರುವನೆಂದೂ-ಎಂದರೆ ಜೀವನು ಕರ್ಮಫಲವನ್ನು ಅನುಭವಿಸುತ್ತಿರುವದನ್ನು ತಾನು ಏನನ್ನೂ ತಿನ್ನದೆ ಸಾಕ್ಷಿಯಾಗಿ ನೋಡುತ್ತಿರುವನೆಂದು ಬೋಧಿಸುತ್ತದೆ. ಇಷ್ಟು ಮಾತ್ರದಿಂದ ಜೀವಪರಮಾತ್ಮರು ಬೇರೆ ಬೇರೆ ಎಂದು ಬಾವಿಸಬಾರದು. ಏಕೆಂದರೆ ಜೀವ ಬ್ರಹ್ಮೈಕ್ಯ ಬೋಧಿಸುವ "ತತ್ತ್ವಮಸಿ, ಅಯಮಾತ್ಮಾ ಬ್ರಹ್ಮ ತತ್ರಕೋಮೋಹಃ ಕಃ ಶೋಕ ಏಕತ್ವಮನು ಪಶ್ಯತಃ ನಾನ್ಯೋಽತೋಽಸ್ತಿದ್ರಷ್ಟಾ, ಶ್ರೋತಾ, ಮಂತಾ. ವಿಜ್ಞಾತಾ, ತದ್ಬ್ರಹ್ಮ, ಸಆತ್ಮಾ" ಇತ್ಯಾದಿ ನೂರಾರು ಶ್ರುತಿಗಳು ವ್ಯರ್ಥವೆನಿಸಿ ವೇದಾಂತಾರ್ಥವೇ ಬಾಧಿಸಲ್ಪಡುವದು (ಬೃ: ಉ 3-7-23)

ಮತ್ತು ಜೀವನು ಕರ್ಮಫಲವನ್ನು ತಿನ್ನುವದಕ್ಕೂ ಜೀವನಿಗೂ ಜ್ಞಾನವಿರಬೇಕು ಪರಮಾತ್ಮನು ತಾನು ಸಾಕ್ಷಿಯಾಗಿ ನೋಡಬೇಕೆನ್ನುವದಕ್ಕೂ ಪರಮಾತ್ಮನಿಗೂ ಜ್ಞಾನವಿರಬೇಕು. ಜ್ಞಾನವು ನಿತ್ಯವೆಂದು ಶ್ರುತಿ ಸ್ಮೃತಿಗಳು ಸಾರುತ್ತಿವೆ ನಿತ್ಯಃಸರ್ವಗತಃಸ್ಥಾಣುರಚಲೋಽಯಂ ಸನಾತನಃ ॥ ಎಂದು ಗೀತೆ-2-24, (ಸತ್ಯಂ ಜ್ಞಾನಮನಂತಂ ಬ್ರಹ್ಮ ॥ ಎಂದು ಶ್ರುತಿ ಜೀವ ಪರಮಾತ್ಮರಿಗೆ ಭೇಧವನ್ನಂಗೀಕರಿಸಿದರೆ ಜ್ಞಾನವು ಭಿನ್ನಿಸುತ್ತದೆಂದು ಒಪ್ಪಬೇಕಾಗುವದು. ಜ್ಞಾನವು ಭಿನ್ನಿಸುತ್ತದೆಂದು ಒಪ್ಪಿದರೆ ಜ್ಞಾನವುಅನಿತ್ಯವೆಂದೊಪ್ಪಬೇಕಾಗುವದು ಆಗ ಮೋಕ್ಷವೇ ಇಲ್ಲವೆಂದಾಗಿ ಮೋಕ್ಷವನ್ನು ಬೋಧಿಸುವ ಶಾಸ್ತ್ರವು ವ್ಯರ್ಥವೆನಿಸುವುದು. ಅದರಿಂದ ಬ್ರಹ್ಮವೇ ಅವಿದ್ಯೋಪಾಧಿಯಿಂದ ವ್ಯವಹರಿಸಿ ಕರ್ತೃತ್ವ ಭೋಕ್ತೃತ್ವಗಳನ್ನು ಹೊಂದಿ ಸುಖ ದುಃಖಗಳನ್ನು ಹೊಂದುತ್ತಾ ಜೀವನೆನಿ

ನುಪಸು. ಉಪಾಧಿಯಿಂದ ಆದ ಧರ್ಮಗಳು ಸ್ವರೂಪವನ್ನು ಕೆಡಿಸುವುದಿಲ್ಲ ಎಂದರೆ ಸೋಕುವುದಿಲ್ಲ ಆದರಿಂದ ಸಂಸಾರವು ಅವಿದ್ಯಾಕೃತವು ಜ್ಞಾನಬಾಧ್ಯವು

ಆದರಿಂದ ಭಾಷ್ಯವು"ಎಲ್ಲಿಯವರೆಗೆ ಈ ಬುದ್ಧಿ ಎಂಬ ಉಪಾಧಿಸಂಬಂಧ ವಿರುವುದೋ ಅಲ್ಲಿಯವರೆಗೆ ಜೀವನ ಜೀವತ್ವವು ಸಂಸಾರತ್ವವು ಇರುವದು ಆದರೆ ಪರಮಾರ್ಥವಾಗಿ ಬುದ್ಧ್ಯುಪಾಧಿಯ ಸಂಬಂಧದಿಂದ ಪರಿಕಲ್ಪಿತ ಸ್ವರೂಪ ಕ್ಕಿಂತ ಬೇರೆಯಾಗಿ ಜೀವನೆಂಬುವನೇ ಇರುವುದಿಲ್ಲ. ನಿತ್ಯಮುಕ್ತಸ್ವರೂಪನೂ, ಸರ್ವಜ್ಞನೂ ಆದ ಈಶ್ವರನಿಗಿಂತ ಬೇರೆಯಾಗಿರುವ ಎರಡನೆಯ ಚೇತನ ವಸ್ತುವು ವೇದಾಂತಾರ್ಥವನ್ನು ಶೋಧಿಸಿದರೆ ಕಂಡುಬರುವುದಿಲ್ಲೆಂದು ಬೋಧಿಸುತ್ತದೆ ಆದರಿಂದ ಬ್ರಹ್ಮವೇ ಅವಿದ್ಯೋಪಾಧಿಯಿಂದ ಜೀವನೆನಿಸಿ ಕರ್ತೃತ್ವ ಭೋಕ್ತೃತ್ವಗಳುಂಟಾಗಿ ಸಂಸಾರಿಯೆನಿಸಿ ವ್ಯವಹರಿಸುವನು ನಿಜಾತ್ಮ ಜ್ಞಾನದಿಂದ ಮೋಕ್ಷವೆಂದೂ, ಆತ್ಮನನ್ನರಿಯದಿರುವದರಿಂದಲೇ ಬಂಧವೆಂದೂ ತಿಳಿಯಬೇಕು. (ಯಾವ ದೇವಚ ಆಯಂ ಬುದ್ಧ್ಯುಪಾಧಿ ಸಂಬಂಧಃತಾವತ್ ಜೀವಸ್ಯ ಜೀವತ್ವಂ ಸಂಸಾರಿತ್ವಂಚ । ಪರಮಾರ್ಥತಸ್ತುನ ಜೀವೋನಾಮ ಬುದ್ಧ್ಯುಪಾಧಿ ಸಂಬಂಧ ಪರಿಕಲ್ಪಿತ ಸರೂಪ ವ್ಯತೀರೇಕೇಣ ಅಸ್ತಿ । ನಹಿ ನಿತ್ಯ ಮುಕ್ತಸ್ವರೂಪಾತ್ ಸರ್ವಜ್ಞಾತ್ ಈಶ್ವರಾತ್ ಅನ್ಯಃ ಜೇತನೋ ಧಾತುಃ ದ್ವಿತೀಯಃ ವೇದಾಂತಾರ್ಥ ನಿರೂಪಣಾಯಾಂ ಉಪಲಭ್ಯತೇ ॥ ಎಂದು ಭಾಷ್ಯ ಬ್ರ : ರೂ 2-3-30 ॥. ನಾನ್ಯೋಽತೋಸ್ತಿದ್ರಷ್ಟಾ ಶ್ರೋತಾ ಮಂತಾ ವಿಜ್ಞಾತಾ ॥ ಎಂದು ಶ್ರುತಿ. ಬ್ರ ಉ 3-7-23).

## — 4 ಜೀವನ ನಿಜರೂಪವು ಬ್ರಹ್ಮವೇ —

1 "ಬ್ರಹ್ಮವಿದಾಪ್ನೋತಿಪರಂ" ಎಂಬ ಶ್ರುತಿ ರೀತ್ಯಾ ಬ್ರಹ್ಮವನ್ನು ತಿಳಿದವನು ಮೋಕ್ಷವನ್ನು ಹೊಂದುತ್ತಾನೆಂದು ಬೋಧಿಸುತ್ತದೆ. 'ನಕರ್ಮಣಾ ಎಂಬ ಶ್ರುತಿ ಕರ್ಮದಿಂದ ಮುಕ್ತಿಯು ಲಭ್ಯವಲ್ಲವೆಂದು ಹೇಳಿ "ಜ್ಞಾನಾ ದೇವತು ಕೈವಲ್ಯಂ" ಎಂಬ ಶ್ರುತಿ ಕೇವಲ ಜ್ಞಾನದಿಂದಲೇ ಮೋಕ್ಷವು ಲಭ್ಯವೆಂದು ಭೋಧಿಸುತ್ತದೆ

2 ಬ್ರಹ್ಮವನ್ನು ತಿಳಿಯುವುದೆಂದರೂ, ಬ್ರಹ್ಮ ಸಾಕ್ಷಾತ್ಕಾರವೆಂದರೂ, ಆತ್ಮಜ್ಞಾನವೆಂದರೂ. ಆತ್ಮ ಸಾಕ್ಷಾತ್ಕಾರವೆಂದರೂ, ಸ್ವಾನುಭವವೆಂದರೂ ಅಪರೋಕ್ಷಾನುಭವವೆಂದರೂ – ಇವೆಲ್ಲವೂ ಸಮಾನಾರ್ಥಕ ಪದಗಳೆಂದು ತಿಳಿಯಬೇಕು

3 ಬ್ರಹ್ಮವು ಸತ್ಯ ಜ್ಞಾನಾ ನಂತರಾ ಸ್ವರೂಪವಾಗಿ ನಿರ್ಗುಣವಾಗಿ ನಿರ್ವಿಶೇಷವಾಗಿ ನಿರಾಕಾರವಾಗಿರುವದರಿಂದ ಇಂದ್ರಿಯಗಳಿಗೆ ಗೋಚರನಾಗದೆ, ಅವಜ್ಞಾನ ಸಗೋಚರನಾಗಿರುವದರಿಂದ ಬ್ರಹ್ಮವನ್ನು ಬಾಹ್ಯದಲ್ಲಿ ತಿಳಿಯಲ್ಪ ಯತ್ನಿಸುವದು ವೃಥಾಯಾಸವು ಬಾಹ್ಯದಲ್ಲಿ ಹುಡುಕುವದು ವ್ಯರ್ಥವು ಬ್ರಹ್ಮವೇ ತಾನು ಸೃಷ್ಟಿಸಿರುವ ಸಕಲ ಶರೀರಗಳಲ್ಲಿಯೂ ಜೀವರೂಪದಿಂದ ಅನುಪ್ರವೇಶಿಸಿ ಸರ್ವೇಂದ್ರಿಯಗಳಿಂದಲೂ ಅಂತಃಕರಣದಿಂದಲೂ ಅವಿದ್ಯೆ ಯಿಂದ ವ್ಯವಹರಿಸಿ ವಿಜ್ಞಾನಾತ್ಮನೆನಿಸಿ ಅಭಿವ್ಯಕ್ತವಾಗಿರುವನು. ಅವನಿಗೆ ಉಪಾಧಿಯಾಗಿರುವ ಅವಿದ್ಯೆಯನ್ನು ವಿದ್ಯೆಯಿಂದ ಕಳೆದರೆ ಅವನೇ ಪರಬ್ರಹ್ಮ ವೆಂದು ತಿಳಿದು ಮುಕ್ತನಾಗುವನೆಂಬ ಶ್ರುತ್ಯಭಿಪ್ರಾಯವನ್ನು ಭಾಷ್ಯವು ಬೋಧಿ ಸಿರುವದು. ಅದರಿಂದ ಈ ದೇಹದಲ್ಲಿಯೇ ಆ ಬ್ರಹ್ಮಾನುಬವವನ್ನು ಹೊಂದ ಬೇಕೆಂಬುದು ವಿಸ್ಮೃತಿಯಾಗಬಾರದು. ಎಲ್ಲೆಲ್ಲಿಯು ಇರುವ ಪರಮಾತ್ಮನನ್ನು ಇಲ್ಲಿಯೇ ತಿಳಿಯಬೇಕೆಂಬುದೇಕೆ ? ಎಂಬ ಆಕ್ಷೇಪಕ್ಕೆ ಪರಿಹಾರವನ್ನೂ ಇದರಿಂದ ಹೇಳಿದಂತಾಯಿತು

4 ಯಾವನು ಈ ಶರೀರದಲ್ಲಿರುವನೋ, ಸೂರ್ಯನಲ್ಲಿರುವವನು ಅವನೇಯೆಂದು "ಸಯಶ್ಚಾಯಂ ಪುರುಷೇ। ಯಶ್ಚಾಸಾವಾದಿತ್ಯೇ। ಸಏಕಃ|| ಎಂಬ ಶ್ರುತಿ ಬೋಧಿಸುತ್ತದೆ. (ತೈ ಉ 2–8–4).

5 ಶಕ್ತಿ, ಭಕ್ತಿ, ಜ್ಞಾನ ಮುಂತಾದವೆಲ್ಲವೂ ಅವ್ಯಕ್ತವೆನಿಸಿ ಅದರದರ ಕಾರ್ಯದಿಂದಲೇ ವ್ಯಕ್ತವಾಗುವದು ಎಲ್ಲರಿಗೂ ತಿಳಿದ ವಿಷಯವೇ ಜ್ಞಾನ ಸ್ವರೂಪನಾದ ಆತ್ಮನು ಹೊರ ಒಳಗೆಲ್ಲಾ ತುಂಬಿದ್ದರೂ ಅವ್ಯಕ್ತವಾಗಿ ಚೈತನ್ಯ ಸ್ವರೂಪನಾಗಿರುವುದರಿಂದ ಅವನ ಕಾರ್ಯದಿಂದಲೇ ಅವನನ್ನು ತಿಳಿಯಬೇಕಾಗಿರುವದು ಈ ಶರೀರದಲ್ಲಿ ಇಂದ್ರಿಯಗಳ ದ್ವಾರಾ

ವ್ಯವಹರಿಸುತ್ತಿರುವವನೇ ಜ್ಞಾನಸ್ವರೂಪನಾದ ಆತ್ಮನೆಂದು ಶ್ರುತಿ ಬೋಧಿಸುತ್ತದೆ (ಯೇನವಾ ಪಶ್ಯತಿ ಯೇನವಾ ಶೃಣೋತಿಯೇನವಾ ಗಂಧಾನಾ ಜಿಘ್ರತಿ, ಯೇ ನವಾಚಂ ವ್ಯಾಕರೋತಿ. ಯೆನವಾ ಸ್ವಾದು ಚಾಸ್ವಾದ್ಚ ವಿಜಾನಾತಿ ಸಆತ್ಮಾ॥ ಎಂದು ಶ್ರುತಿ, (ಐತ ಉ. 3–1–1)

6 ಪರಮಾತ್ಮನು ನಿರ್ವಿಕಾರನಾಗಿ ನಿಶ್ಚಲನಾಗಿ ಸ್ವರೂಪದಿಂದ ಸುಮ್ಮನಿರುವದು ಅವನ ಪರಮಾರ್ಥ ಸ್ವರೂಪವನಿಸುವದು ಅವನು ತನ್ನ ಮಾಯೆಯಿಂದ ಚಲಿಸಿ ಜಗದಾದಿಗಳನ್ನು ರಚಿಸಿ ಈಶ್ವರನೆನಿಸುವನು. ಈ ಪ್ರವತ್ತ್ಯ ಪ್ರವೃತ್ತಿಗಳು ಅವನ ಸ್ವಭಾವವೆಂದೂ, ಸ್ವಭಾವವನ್ನಾಕ್ಷೇಪಿಸ ಬಾರದೆಂದೂ ಭಾಷ್ಯವು ಬೋಧಿಸುತ್ತದೆ.

(1) ಪರಮಾರ್ಥರೂಪವು — 'ಪುರುಷಾಶ್ಮವದಿತಿಚೇತ್ ತಥಾಪಿ" ಎಂಬ ಸೂತ್ರರೀತ್ಯಾ ಭಾಷ್ಯವು ಪರಮಾತ್ಮನು ತನ್ನ ಸ್ವರೂಪವನ್ನಾಶ್ರಯಿಸಿ ಔದಾಸೀನ್ಯ ಸ್ವರೂಪನೆಂದೂ, ತನ್ನ ಮಾಯೆಯನ್ನಾಶ್ರಯಿಸಿ ಪ್ರವರ್ತಕತ್ವ ಉಂಟಾಗಬಹುದೆಂದೂ ಈ ಅತಿಶಯವು ಇರಬಹುದೆಂದೂ ಬೋಧಿಸುತ್ತದೆ. (ಬ್ರ: ಸೂ 2- –7)

ಮತ್ತು ಮಾಯಾವಿಯು ತನ್ನ ಮಾಯಾಶಕ್ತಿಯಿಂದ ತನ್ನ ಸ್ವರೂಪ ಹಾನಿ ಇಲ್ಲದೆ ಅನ್ಯನಂತೆ ಕಾಣಿಸಿಕೊಂಡು ತನ್ನ ಲೀಲೆಯನ್ನು ತೋರಿಸಿ ತನ್ನ ನಿಜರೂಪದಿಂದಿರುವದು ಎಲ್ಲರಿಗೂ ತಿಳಿದವಿಷಯವೇ ಇದರಂತೆ ಪರಮಾತ್ಮನು ಅವಿದ್ಯೋಪಾದಿಯಿಂದ ವ್ಯವಹರಿಸಿ ಜೀವನೆನಿಸಿದರೂ ತನ್ನ ನಿಜರೂಪವು ಕೆಡದು. ಸ್ವಪ್ನವ್ಯವಹಾರವಾವುದೂ ಸ್ವಪ್ನ ಕಾಣುವವನನ್ನು ಅಂಟುವದಿಲ್ಲ ವೆಂಬುದೂ ಎಲ್ಲರಿಗೂ ತಿಳಿಯುವದು. ಅದರಂತೆ ಆತ್ಮಸ್ವರೂಪವನ್ನೂ ಜೀವನ ಸ್ವರೂಪವನ್ನು ತಿಳಿಯಬಹುದು.

(2) ಅದು ಚಲಿಸುತ್ತದೆ, ಅದು ಚಲಿಸುವದಿಲ್ಲ. ಅದು ಅತಿದೂರದಲ್ಲಿದೆ ಅದು ಬಹಳ ಹತ್ತಿರದಲ್ಲಿದೆ. ಅದು ಎಲ್ಲರ ಒಳಗಿದೆ: ಅದು ಎಲ್ಲಕ್ಕೂ ಹೊರಗೂ ಇದೆ. ಎಂದು ಬೋಧಿಸುವ ಶ್ರುತಿಯು ಇದೆ. (ಈ. ಉ: ಮು 7). ಇಲ್ಲಿ

ಪರಮಾತ್ಮನು ವಿರುದ್ಧ ಧರ್ಮಗಳಿರುವಂತೆ ಕಾಣುತ್ತಾನೆ ಅದರ ಪರಿಹಾರಕ್ಕಾಗಿ ಭಾಷ್ಯವು "ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್ ಎಂಬ ಸೂತ್ರರೀತ್ಯಾ ಈಶ್ವರನೂ ಸರ್ವಜ್ಞನೂ ಮಹಾಮಾಯಾಸ್ವರೂಪನೂ ಆಗಿರುವುದರಿಂದ ಪ್ರವೃತ್ತ್ಯಪ್ರವೃತ್ತಿಗಳು ವಿರುದ್ಧವಾಗುವುದಿಲ್ಲವೆಂದು ವಿವರಿಸಿ ಹೇಳಿರುತ್ತದೆ. ಪ್ರವೃತ್ತಿ ರೂಪವು ಅಪರಮಾರ್ಥವೆನಿಸುವದು ಜೀವಭಾವವು ಇದರಲ್ಲಿಯೇ ಸೇರಿದೆ ಎಂದು ತಿಳಿಯಬೇಕು

7 "ಸತ್ಯಂಜ್ಞಾನಮನಂತಂ ಬ್ರಹ್ಮ" ಎಂಬ ಶ್ರುತಿ ಬ್ರಹ್ಮವು ಕೇವಲ ಜ್ಞಾನ ಸ್ವರೂಪನೆಂದು ಬೋಧಿಸುತ್ತದೆ ಅದರಿಂದ ಬ್ರಹ್ಮವು ಯಾರಿಂದಲೂ ತಿಳಿಯಲ್ಪಡುವದಲ್ಲ ಜ್ಞಾನವು ವಿಷಯವಾಗುವುದೇ ಇಲ್ಲ. ಅದು ಜ್ಞೇಯವಾಗದು ಅದು ಯಾವಾಗಲೂ ದ್ರಷ್ಟೃವೇ ಹೊರತು ದೃಶ್ಯವಲ್ಲ. ಬ್ರಹ್ಮನನ್ನರಿಯಲು ಇದು ಮುಖ್ಯ ಲಕ್ಷಣವು-ಎಂದರೆ ಎಲ್ಲವನ್ನೂ ಅರಿಯುವನೇ ತಾನು ಅವನು ಎಲ್ಲವನ್ನು ನೋಡುವವನು ಅವನನ್ನು ನೋಡುವವರು ಯಾರೂ ಇಲ್ಲ ಅವನರಿಯದ ಯಾವ ವಸ್ತುವೂ ಸಂಭವಿಸುವದಿಲ್ಲ ಇದನೆನಿಸಿ ಅವನನ್ನು ಯಾರೂ ತೋರಿಸಲಾಗುವದಿಲ್ಲ. ಅವನನ್ನು ಎಲ್ಲವನ್ನೂ ನೋಡುವ ಸಾಕ್ಷಿ

8 ಅವನು ಪ್ರತಿಯೊಬ್ಬರಲ್ಲಿಯೂ ಮಿಕ್ಕ ಎಲ್ಲಕ್ಕಿಂತಲೂ ಒಳಗಿನವನು ಎಂದು ಶ್ರುತಿ ಬೋಧಿಸುತ್ತದೆ, (ಸರ್ವಸ್ಮಾತ್ ಅಂತರ ತರಂಯದಯ ಮಾತ್ಮಾ॥ ಎಂದು ಶ್ರುತಿ ಬೃ ಉ 1-4-8)

9 "ಅಥ ಆದೇಶೋ ನೇತಿ ನೇತಿ ನ ಹ್ಯೇತಸ್ಮಾತ್ ಇತಿ ನೇತ್ಯನ್ಯತ್ ಪರಮ ಸ್ತಿ" ಎಂಬ ಶ್ರುತಿಯ ಆದೇಶವು ಹೀಗಲ್ಲ, ಹೀಗಲ್ಲ ಎಂದು ಹೇಳಿ ಹೀಗಲ್ಲ ಎಂಬುದಕ್ಕಿಂತ ಮತ್ತೊಂದು ಹೆಚ್ಚಿನದಿಲ್ಲವೆಂದು ಹೇಳುತ್ತದೆ ದೇಹವನ್ನೂ, ಪಂಚ ಪ್ರಾಣಗಳನ್ನೂ ದಶೇಂದ್ರಿಯಗಳನ್ನೂ ಅವುಗಳ ವ್ಯಾಪಾರವನ್ನು, ಅಂತಃಕರಣ ಚತುಷ್ಟಯವನ್ನು ಅದರ ವ್ಯಾಪಾರವನ್ನೂ— ಎಲ್ಲವನ್ನೂ ಇವುಗಳಲ್ಲಿ ಯಾವುದೊಂದೂ ತನ್ನನ್ನರಿಯದೆಂದೂ, ಏಕೆಂದರೆ, ಅದೆಲ್ಲವೂ ಕಾಣುತ್ತಿರುವದೆಂದೂ, ದೃಶ್ಯವೆನಿಸಿ ವಿಷಯವೆಂದೂ ಅದರಿಂದ

ತಾನಲ್ಲವೆಂದು ಕಳೆದು ಉಳಿದಿರುವ ಅವಶಿಷ್ಟ ಜ್ಞಾನವೇ ತಾನೆಂದು ನಿಶ್ಚಯಿಸಲು ಅದುವೇ ಆತ್ಮನೆಂದೂ ಬ್ರಹ್ಮವೆಂದೂ ತಿಳಿಯಬೇಕು ಎಲ್ಲವನ್ನು ದೃಶ್ಯವೆಂದು ಕಳೆದ ಮೇಲೆ ಉಳಿದ ತಾನೇ ಪರಶಿವನೆಂದರಿಯಬೇಕು (ಬೃ ಉ 2-3-6) ತನ್ನನ್ನು ಕಳೆಯುವರಾರಿಲ್ಲ

ದೃಶ್ಯವನ್ನು ಕಂಡಂತೆ ಬ್ರಹ್ಮವನ್ನು ಏಕೆ ಕಾಣಬಾರದು ? ಎಂದರೆ ಬ್ರಹ್ಮವು ಸದಾ ನೋಡುವವನೇ ಹೊರತು ಕಾಣಿಸುವವನಲ್ಲ ಅದರಿಂದ ಬ್ರಹ್ಮವು ವಿಷಯನಾಗುವದೇ ಇಲ್ಲ ಅವನು ಯಾವಾಗಲೂ ಸಾಕ್ಷಿ ಉಳಿಯುವನನ್ನು (ಅವಶಿಷ್ಟ ಜ್ಞಾನವನ್ನು) ಕಳೆಯುವದೆಂತು ? ಎಂದರೆ ಬ್ರಹ್ಮವು ವಿಷಯವಾಗುವುದೇ ಇಲ್ಲ ಆದ ಕಾರಣ ಯಾವದು ವಿಷಯವೋ ಅದು ಬ್ರಹ್ಮವೇ ಅಲ್ಲ.

10 "ಯನ್ಮನಸಾನಮನುತೇ। ಯೇನಾಹುರ್ಮನೋಮತಂ। ತದೇವ ಬ್ರಹ್ಮತ್ವಂ ವಿದ್ಧಿ ನೇದಂಯದಿದ ಮುಪಾಸತೇ" ಎಂಬ ಶ್ರುತಿ ಯಾವದು ಮನಸ್ಸಿನಿಂದ ಮನನ ಮಾಡಲ್ಪಡದೋ, ಆದರೆ ಯಾವದರಿಂದ ಮನಸ್ಸು ಮನನ ಮಾಡುತ್ತಿಹುದೋ, ಅದೇ ಬ್ರಹ್ಮವೆಂದು ತಿಳಿ ಇದೆಂದು ಕಂಡುಬರುವದು ವಿಷಯ. ಅದು ಉಪಾಸನೆಗೆ ಯೋಗ್ಯವಲ್ಲ (ಕೇ ಉ 1-5)

11 a) "ಪ್ರತಿಬೋಧ ವಿದಿತಂ ಮತ ಮಮೃತತ್ವಂ ಹಿ ವಿಂದತೇ । ಆತ್ಮನಾ ವಿಂದತೇ ವೀರ್ಯಂ, ವಿದ್ಯಯಾ ವಿಂದತೇಽಮೃತಂ" ಎಂಬೀ ಶ್ರುತಿ (ಕೇನ ಉಪ: 2 ಖಂ ಮಂ 4) ವಿಷಯಗಳನ್ನರಿಯುವಾಗಲೆಲ್ಲಾ ಆತ್ಮನೇ ತಿಳಿಯುತ್ತಿದ್ದಾನೆಂದು ತಿಳಿದರೆ ಸರಿಯಾಗಿ ತಿಳಿದಂತಾಯ್ತು ಏಕೆಂದರೆ ಆಗ ಅವನು ವಿದ್ಯೆಯಿಂದ ಅಮೃತತ್ವವನ್ನು ಪಡೆಯುತ್ತಾನೆ ವೀರ್ಯವನ್ನು ಹೊಂದುತ್ತಾನೆಂದು ಬೋಧಿಸುತ್ತದೆ

b) "ನೈಷಾ ತರ್ಕೇಣ ಮತಿರಾಪನೇಯಾ" ಎಂಬ ಶ್ರುತಿ (ಕಠ 1-9) ಈ ಮತಿಯು ತರ್ಕದಿಂದ ಬರುವದಿಲ್ಲವೆಂದು ಬೋಧಿಸುತ್ತದೆ

12 "ಇಹ ಚೇ ದವೇ ದೀದಥ ಸತ್ಯಮಸ್ತಿ । ನ ಚೇದಿ ಹಾವೇದೀ

ಸ್ಮಾತ್ಪತೀ ವಿನಷ್ಟಿಃ । ಭೂತೇಷು ಭೂತೇಷು ವಿಚಿತ್ಯ ಧೀರಾಃ ಪ್ರೇತ್ಯಾಸ್ಮಲ್ಲೋಕಾ ದಮೃತಾ ಭವಂತಿ" ಎಂಬ ಶ್ರುತಿ (ಕೇನ 2–5 ) ಈ ತತ್ತ್ವವನ್ನು ಇಲ್ಲಿಯೇ ಅರಿತರೆ ಅದು ಸತ್ಯವು ಇಲ್ಲದಿದ್ದರೆ ಅದು ದೊಡ್ಡ ನಷ್ಟವು. ಸಮಸ್ತ ಭೂತಗಳಲ್ಲಿರುವ ಆತ್ಮನನ್ನರಿತ ಧೀರರು ಈ ಲೋಕವನ್ನು ಬಿಟ್ಟ ಮೇಲೆ ಅವರು ಅಮೃತರಾಗುವರು ಎಂದು ಹೇಳುತ್ತದ

13 "ಅಶರೀರಂ ಶರೀರೇಷು ಅನವಸ್ಥೇ ಷ್ವವಸ್ಥಿತಂ ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ" ಎಂಬ ಶ್ರುತಿ (ಕಠ: ಉ 1–2–22) ಈ ಅನಿತ್ಯವಾದ ಶರೀರಗಳಲ್ಲಿ ಆತ್ಮನು ನಿತ್ಯನಾಗಿ ದೊಡ್ಡವನಾಗಿ ವಿಭುವಾಗಿರುವನೆಂದು ತಿಳಿದ ಧೀರನು ಶೋಕವನ್ನು ಮೀರುವನೆಂದು ಬೋಧಿಸುತ್ತದೆ

14 "ಪುರುಷಾನ್ನ ಪರಂ ಕಿಂಚಿತ್ ಸಾಕಾಷ್ಠಾ ಸಾ ಪರಾಗತಿಃ" ಎಂಬ ಶ್ರುತಿ (ಕಠ ಉ 1–2–11) ಪುರುಷನಿಗಿಂತ ಹೆಚ್ಚಿನದು ಯಾವದೂ ಇಲ್ಲ ಇದೇ ಕೊನೇ ಹೆಚ್ಚಿನ ಗತಿ ಎಂದು ಬೋಧಿಸುತ್ತದೆ

15 "ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾನ್ ಶ್ಚ ಮೈಥುನಾನ್ । ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ । ಏತ ದ್ವೈತತ್" ಎಂಬ ಶ್ರುತಿ (ಕಠ –1–3) ಶಬ್ದ ಸ್ಪರ್ಶರೂಪ ರಸಗಂಧ ಮೈಥುನಗಳನ್ನು ಯಾವನು ಅರಿತು ಕೊಳ್ಳುತ್ತಿರುವನೋ ಅವನೇ ಆತ್ಮನು ಇಲ್ಲಿ ಉಳಿದಿರುವದೇನು ? ಇದೇ ಅದು ಎಂದು ಬೋಧಿಸುತ್ತದೆ

16 ಜಾಗ್ರತ್ತಿನಲ್ಲಿ ಯಾವ ಅರಿವು ವಿಷಯಗಳೆಲ್ಲವನ್ನು ಅರಿಯುತಿದೆಯೋ, ನಿದ್ರೆಯಲ್ಲಿ ಸ್ವಪ್ನ ಪ್ರಪಂಚವನ್ನು ರಚಿಸಿ ಕಾಮಿಸಿ ವ್ಯವಹರಿಸುತ್ತಾ ತಾನು ನಿದ್ರಿಸದೇ ಎಚ್ಚತ್ತಿರುವನೋ, ಅವನೇ ಬ್ರಹ್ಮವು. ಅದೇ ಅಮೃತವು ಅವನೇ ಸರ್ವಾಶ್ರಯವು ಅವನನ್ನು ಯಾರೂ ಮೀರಲಾರರೆಂದು ಬೋಧಿಸುತ್ತದೆ. ಜೀವರೂಪನಲ್ಲಿರುವವನೇ ಪರಮಾತ್ಮನೆಂದರ್ಥ ॥ (ಕಠ 2–2–8)

17 "ಏಕಸ್ತಥಾ ಸರ್ವಭೂತಾಂತರಾತ್ಮಾ" ಎಂಬ ಶ್ರುತಿ ಸರ್ವ

ಭೂತಗಳಲ್ಲಿರುವ ಆತ್ಮನೊಬ್ಬನೇ ಎಂದು ಬೋಧಿಸುತ್ತದೆ (ಕಠ. 2–2–10)

13 "ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ। ಬುದ್ಧಿಶ್ಚ ನವಿಚೇಷ್ಟತಿ ತಾಮಾಹುಃ ಪರಮಾಂಗತಿಂ' ಎಂಬ ಶ್ರುತಿ ಯಾವಾಗ ಪಂಚ ಜ್ಞಾನೇಂದ್ರಿಯಗಳು ಮನಸ್ಸು ವ್ಯವಹರಿಸದೇ ಬುದ್ಧಿಯು ಚಲಿಸದೇ ಸುಮ್ಮನಿರಲು ಅದೇ ಆತ್ಮಸಾಕ್ಷಾತ್ಕಾರವೆಂದೂ ಬ್ರಹ್ಮಾನುಭವವೆಂದೂ, ಪರಮಗತಿಯೆಂದೂ. ಮುಕ್ತಾವಸ್ಥೆಯೆಂದೂ, ತುರ್ಯವೆಂದೂ, ಸಮಾಧಿಯೆಂದೂ ಹೇಳಲ್ಪಡುವದೆಂದು ಶ್ರುತಿ ಬೋಧಿಸುತ್ತಿರುವದು (ಕಠ ಉ 2–3–10).

ಇದನ್ನು ದೃಢವಾಗಿ ಅರಿತ ಪುಣ್ಯಪುರುಷನಿಗೆ ಸಕಲ ಕಾಮಗಳು ಬಿಟ್ಟು ಹೋಗುವವು. ತಾನು ಚೈತನ್ಯಾತ್ಮನೆಂದು ಅರಿಯುವನು ಅಶರೀರಿಯಾಗಿ ಅಸಂಸಾರಿಯಾಗಿ ನಿರ್ಮೋಹಿಯಾಗಿ ಮನುಜಭಾವವ ನೀಗಿ ಬ್ರಹ್ಮಭಾವವನ್ನು ಹೊಂದಿ ಅಮೃತ ಸ್ವರೂಪನಾಗಿ ಜೀವನ್ಮುಕ್ತನಾಗುವನು ಎಂದು ಶ್ರುತಿ ಬೋಧಿಸುತ್ತದೆ.

ಎಲ್ಲವನ್ನು ಕಳೆದು ಉಳಿದ ಶುದ್ಧಜ್ಞಾನ ಸ್ವರೂಪನಾದ ಆತ್ಮನಿವನೇ ಈ ಜ್ಞಾನ ಸ್ವರೂಪನಾದ ಚೈತನ್ಯವು ದಿವ್ಯವಾದ ನಿರಾಕಾರವು, ಒಳಹೊರಗೆಲ್ಲ ತುಂಬಿರುವನು. ಹುಟ್ಟು ಸಾವುಗಳಿಲ್ಲದ್ದು ಇದರೊಳು ಪ್ರಾಣವಿಲ್ಲ ಹಸಿತೃಷೆಗಳಿಲ್ಲ ಮನಸ್ಸಿಲ್ಲ. ನಿಶ್ಚಿಂತೆಯ ಸ್ವರೂಪವುಳ್ಳದ್ದು. ಪ್ರಕೃತಿಗಿಂತ ಹೆಚ್ಚಿನದು ಇದು ಸ್ವಯಂ ಸಿದ್ಧವಾಗಿರುವದು ಇದನ್ನು ಹೊಂದಲು ಯಾವ ಸಾಧನೆಯು ಬೇಕಿಲ್ಲ ಶಾಂತಿಯೇ ಸ್ವರೂಪವಾಗಿರುವದು ಇವರಲ್ಲಿ ಯಾವ ಸಂಶಯವು ಉಳಿದಿರುವದಿಲ್ಲ. ಈ ಆತ್ಮನೇ ತಾನೆಂದರಿತವನು ಅಮೃತಸ್ವರೂಪನು ಆತನಿಗೆ ಮರಣ ಭಯವಿಲ್ಲ ಸಕಲ ಲೋಕಗಳಿಗೆ ಆಶ್ರಯನಿವನೇ. ಇದೇ ಪರಮಪವಿತ್ರವಾದದ್ದು. ಧರ್ಮ ಸ್ವರೂಪವು. ಅತಿ ರಹಸ್ಯವಾದದ್ದು ಹಿಡಿವ ಧರ್ಮಂಗಳಿಲ್ಲ ಬಿಡುವ ಬಾಧಕಗಳಾವುದೂ ಇಲ್ಲ ಮುಂದೆ ಪಡೆಯ ಬೇಕಾಗಿರುವ ಸದ್ಗತಿ ಯಾವದೊಂದೂ ಇಲ್ಲ. ಇವನೊಳು ರಾಗಾದಿಗಳಿಲ್ಲ. ಇವನಲ್ಲಿ ಪುಣ್ಯಪಾಪಗಳಿಲ್ಲ ನಿರ್ದೋಷ ಸ್ವರೂಪನು. ಇದನ್ನರಿತದ್ದರಿಂದಲೇ

ಈ ರೂಪಾವಿದ್ಯೆಯು ತಾನೇ ನಾಶವಾಗುವದು. ನದಿಗಳು ಸಮುದ್ರವನ್ನು ಸೇರಿ ಸಮುದ್ರಾಕಾರವನ್ನು ಹೊಂದುವಂತೆ ಆತ್ಮನೇ ತಾನೆಂದರಿತವನು ನಾಮ ರೂಪಗಳನ್ನೆಲ್ಲಾ ಬಿಟ್ಟು ಆ ಪರಮಾತ್ಮನೇ ತಾನಾಗುವನು ಇವನೇ ಜೀವನ್ಮುಕ್ತನು ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ತಾನಾಗುತ್ತಾನೆಂದು ಹೇಳುವ ಶ್ರುತಿಯೂ ಇದೆ.

19 ಈ ಶರೀರದಲ್ಲಿ ಮೂರವಸ್ಥೆಗಳನ್ನು ಅನುಭವಿಸುತ್ತಿರುವ ಜೀವನು ಜಾಗ್ರತಾವಸ್ಥೆಯಲ್ಲಿ ವಿಶ್ವನೆನಿಸುವನೆಂದೂ, ಸ್ವಪ್ನಾವಸ್ಥೆಯನ್ನನುಭವಿಸುತ್ತಾ ತೈಜಸನೆನಿಸುವನೆಂದೂ, ಸುಷುಪ್ತ್ಯಾವಸ್ಥೆಯನ್ನನುಭವಿಸುತ್ತಾ ಪ್ರಾಜ್ಞನೆನಿಸುವನೆಂದೂ, ಆ ಪ್ರಾಜ್ಞನು ಏಕೋಽದ್ವಿತೀಯನೆಂದೂ, ಯಾವ ವ್ಯವಹಾರವೂ ಇಲ್ಲದೇ, ತನ್ನ ನಿಜರೂಪದಿಂದ ಸಿದ್ಧನಾಗಿರುತ್ತಾನೆಂದೂ, ಪ್ರಾಜ್ಞನನ್ನೇ ಆತ್ಮನೆಂದೂ, ಆತ್ಮನೇ ಅಮೃತನೆಂದೂ, ಅಭಯನೆಂದೂ, ಅವನೇ ಬ್ರಹ್ಮವೆಂದೂ ಶ್ರುತಿ ಬೋಧಿಸುತ್ತದೆ (ಛಾಂ ಉ 8–3–4)

(1) ಈ ಪ್ರಾಜ್ಞನೇ ಸರ್ವೇಶ್ವರನೆಂದೂ, ಸರ್ವಜ್ಞನೆಂದೂ, ಅಂತರ್ಯಾಮಿ ಎಂದೂ, ಜಗದುತ್ಪತ್ತ್ಯಾದಿಗಳಿಗೆ ಕಾರಣನೆಂದೂ. ಮತ್ತೊಂದು ಶ್ರುತಿ ಹೇಳುತ್ತದೆ (2) ಸುಷುಪ್ತ್ಯಾವಸ್ಥೆಯಲ್ಲಿ ಜೀವರೆಲ್ಲರೂ ಪ್ರಾಜ್ಞನಲ್ಲಿ ಸೇರಿ ಒಂದಾಗುತ್ತಾರೆಂದೂ ಮತ್ತೊಂದು ಶ್ರುತಿ ಹೇಳುತ್ತದೆ ಹಾಗೆ ಇವರೆಲ್ಲರೂ ಸತ್ತಿನಲ್ಲಿ ಸೇರಿದ್ದರೂ ಸತ್ತಿನಲ್ಲಿ ಸೇರಿರುವೆವೆಂದು ಅರಿಯದೇ ಇರುವರು ಎಂದು ಇನ್ನೊಂದು ಶ್ರುತಿ ಹೇಳುತ್ತದೆ

(1) ಏಷ ಸರ್ವೇಶ್ವರ, ಏಷ ಸರ್ವಜ್ಞ, ಏಷೋಂತರ್ಯಾಮಿ, ಏಷಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಂ"ಎಂದು ಶ್ರುತಿ (ಮಾಂ· ಉ ಮಂ 6), (2) ಪ್ರಾಜ್ಞೇನಾತ್ಮನಾಸಂಪರಿಷ್ವಕ್ತಃನ ಬಾಹ್ಯಂ ಕಿಂಚನವೇದನಾಂತರಂ ॥ ಎಂದು ಶ್ರುತಿ (ಬೃ ಉ· 4–3–21), (3) ಇಮಾಃ ಸರ್ವಾಃ ಪ್ರಜಾಃ ಸತಿಸಂಪದ್ಯನವಿದುಃ ಸತಿಸಂಪದ್ಯಾಮಹ ಇತಿ ॥ ಎಂದು ಶ್ರುತಿ (ಛಾಂ ಉ 6–9–2)

20 ಈ ಸುಷುಪ್ತ್ಯಾತ್ಮಕನಾದ ಪ್ರಾಜ್ಞನು ಪರಮೇಶ್ವರನಲ್ಲವೆಂದರೆ

ಬ್ರಹ್ಮಜ್ಞಾನವಾಗಲು ದ್ವಾರವೇ ಇಲ್ಲವೆಂದಾಗಿ ಶ್ರುತ್ಯರ್ಥವೆಲ್ಲವು ವ್ಯರ್ಥವೆಂದಾಗುವದು. ಅನ್ಯ ಮಾರ್ಗದಲ್ಲಿ ಪರಮಾತ್ಮನ ಜ್ಞಾನವಾಗಲು ಸಾಧ್ಯವೇ ಇಲ್ಲ

"ಐತದಾತ್ಮ್ಯಮಿದಗಂಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ' ಎಂಬ ಶ್ರುತಿ ನಿಸ್ಸಂದಿಗ್ಧವಾಗಿ ಜೀವನು ಆ ಪರಬ್ರಹ್ಮವೆಂದು ಬೋಧಿಸುತ್ತದೆ ಅವಿದ್ಯೋಪಾಧಿಯಿಂದ ಜೀವಭಾವವು (ಕರ್ತೃತ್ವ ಭೋಕ್ತೃತ್ವಾದಿಗಳು) ತೋರುತ್ತಿರುವದೇ ವಿನಾ ಜೀವನ ನಿಜರೂಪವು ಬ್ರಹ್ಮವೇ ಎಂಬುದು ಶ್ರುತ್ಯಂತ ಸಿದ್ಧಾಂತವು ಕಾಣುವ ದೃಶ್ಯವೆಲ್ಲವನ್ನು ತಾನಲ್ಲವೆಂದೂ ತಿಳಿಯಲು ಎಲ್ಲಿ ತನಗೇನೂ ಕಾಣುವದಿಲ್ಲವೋ ಶಬ್ದವಾವುದೂ ಕೇಳುವದಿಲ್ಲವೋ, ಅನ್ಯವಾವುವನ್ನು ಅರಿಯುತ್ತಿಲ್ಲವೋ ಅದೇ ಭೂಮವೆಂದೂ–ಎಂದರೆ ಪರಿಪೂರ್ಣವೆಂದೂ —ಅದೇ ಆತ್ಮನೆಂದು ಅವನ್ನೇ ತಿಳಿಯಬೇಕೆಂದೂ, ಯಾವದು ಭೂಮವೋ ಅದೇ ಸುಖವೆಂದೂ ಅನ್ಯವೆಲ್ಲವೂ, ಅಲ್ಪವೆಂದೂ ಸುಖವಲ್ಲವೆಂದೂ ಶ್ರುತಿ ಬೋಧಿಸುತ್ತದೆ. (ಛಾಂ. ಉ 7–23–1, 7,24-1) ॥

ಪ್ರಾಜ್ಞನು ಮಾತ್ರವೇ ಬ್ರಹ್ಮ ಸ್ವರೂಪನೆಂದರ್ಥವಲ್ಲ ವಿಶ್ವತೈಜಸರೂ ಅದೇ ಬ್ರಹ್ಮ ಸ್ವರೂಪವೇ ಆದರೆ ವಿಶ್ವತೈಜಸರು ವ್ಯವಹಾರವುಳ್ಳವರಂತೆ ಗೋಚರವಾಗುತ್ತಾರೆ ಯಾವ ವ್ಯವಹಾರವೂ ಇಲ್ಲದ್ದರಿಂದ ಪ್ರಾಜ್ಞನು ನಿರುಪಾಧಿಕನಾಗಿ ನಿಜರೂಪದಿಂದಿರುವನು ಅದಕ್ಕಾಗಿಯೇ ಈ ಕಣ್ಣಿನಲ್ಲಿ ನೋಡುತ್ತಿರುವವನೇ ಆತ್ಮನು ಅವನೇ ಅಮೃತವು. ಅಭಯವು ಅವನೇ ಬ್ರಹ್ಮವು ಎಂದೂ (ಛಾಂ ಉ 8–7–4), ಯಾವನು ತನ್ನ ಮಹಿಮೆಯಿಂದ ಸ್ವಪ್ನದಲ್ಲಿ ಸಮಸ್ತ ಜಗತ್ತನ್ನು ಸೃಜಿಸಿಕೊಂಡು ಚರಿಸುತ್ತಿರುವನೋ ಅವನೇ ಆತ್ಮನು. ಅಮೃತನು ಅಭಯನು ಅವನೇ ಬ್ರಹ್ಮವು ಎಂದೂ (ಛಾಂ ಉ. 8–10–1), ಯಾವನು ಯಾವಾಗ ಸುಪ್ತನಾಗಿ ಯಾವ ಸ್ವಪ್ನವನ್ನರಿಯದೆ—ಮನಸ್ಸು ಇಂದ್ರಿಯಗಳು ಉಪರಮಿಸಿರುವವೋ—ಅವನೇ ಪ್ರಾಜ್ಞನು ಕೇವಲ ಜ್ಞಾನ ಸ್ವರೂಪನು ಆತ್ಮನು ಅಮೃತನು ಅಭಯನು. ಅದೇ ಬ್ರಹ್ಮವು ಎಂದೂ ಶ್ರುತಿ ಬೋಧಿಸುತ್ತದೆ ಆತ್ಮನಿಗೆ ಸುಷುಪ್ತಿಯೇ ಸ್ಥಾನವೆಂದಾಗಿ ಪ್ರಾಜ್ಞನೇ ಪರಮೇಶ್ವರನೆಂದಾಯಿತು ಅವನೇ ಸರ್ವಜ್ಞನು ಸರ್ವೇಶ್ವರನು

ಸರ್ವ ಭೂತೋತ್ಪತ್ತ್ಯಾದಿಗಳಿಗೆ ಕಾರಣನು ಇದೇ ಜೀವನ ನಿಜ ರೂಪವು.

ಶಂ —ಸುಷುಪ್ತಿಯಲ್ಲಿ ಜೀವನು ತನ್ನ ಜೀವತ್ವವನ್ನು ಬಿಟ್ಟು, ತನ್ನ ನಿಜ ರೂಪದಿಂದ ಎಂದರೆ ಸರ್ವೇಶ್ವರನಾಗಿರುತ್ತಾನೆಂದ ಮೇಲೆ ಸುಷುಪ್ತಿಯಲ್ಲಿ ಮೂಲಾವಿದ್ಯೆ ಇದೆ ಎಂಬುದು ಹೇಗೆ ಸರಿ ? ಎಂಬುದು ಮೂಲಾವಿದ್ಯಾ ನಿರಾಸವಾದಿಗಳ ಆಕ್ಷೇಪವು

ಸಮಾಧಾನ —ಮೂಲಾವಿದ್ಯೆಯು ಇಲ್ಲವೆಂದಾದರೆ ಅದೇ ಪರ ಮಾರ್ಥಾವಸ್ಥೆಯೆಂದಾಗಿ ನಿದ್ರಿಸಿದ ಮಾತ್ರಕ್ಕೆ ಮುಕ್ತನಾಗುವನೆಂದು ಆಗುವ ದಲ್ಲ ! ಇದು ಭಾಷ್ಯ ವಿರುದ್ಧವು (ಸುಪ್ತ ಮಾತ್ರೋ ಮುಚ್ಯೇತ ಇತಿ ಆಪದ್ಯೇತ ॥ ಎಂದು ಬಾಷ್ಯ ಬ್ರ ಸೂ 3–2–9) ಅದರಿಂದ ಸುಷುಪ್ತಿ ಯಲ್ಲಿ ಮೂಲಾ ವಿದ್ಯೆಯು ಇದೆ ಎಂಬುದೇ ಯುಕ್ತವು

## 5 ಮೂಲಾವಿದ್ಯೆಯು ಸುಷುಪ್ತಿಯಲ್ಲಿ ಇದೆ ಎಂದೇ ತಿಳಿಯಬೇಕೆನ್ನುವದಕ್ಕೆ ಅನ್ಯ ಕಾರಣಗಳು

1 ಬ್ರಹ್ಮವನ್ನು ತಿಳಿದವನು ಬ್ರಹ್ಮವೇಯಾಗುತ್ತಾನೆಂದು ಶ್ರುತಿ ಹೇಳುತ್ತಿದೆಯೋ ಹೊರತು ಬ್ರಹ್ಮವನ್ನು ಸೇರಿ ಒಂದಾಗುವದು ಮುಕ್ತಿಯೆಂದು ಹೇಳಿರುವದಿಲ್ಲ, ಏಕೆಂದರೆ “ತಇಹ ವ್ಯಾಘ್ರೋವಾ ಸಿಂಹೋವಾವೃಕೋವಾ ವರಾಹೋವಾ”ಎಂಬ ಶ್ರುತಿ ಸುಷುಪ್ತಿಯಲ್ಲಿ ನರರಿಗೆ ಮಾತ್ರವೇ ಅಲ್ಲ ಮತ್ತೇ ನೆಂದರೆ ಪಶ್ವಾದಿಗಳೂ ಕ್ರಿಮಿ ಕೀಟಾದಿಗಳೂ—ಎಲ್ಲಾ ಪ್ರಾಣಿಗಳೂ ಸುಷುಪ್ತಿ ಯಲ್ಲಿ ಪರಮಾತ್ಮನಲ್ಲಿ ಸೇರಿ ಒಂದಾಗುವವೆಂದು ತಿಳಿಸುತ್ತದೆ. ಅದರಿಂದ ಸುಷುಪ್ತಿಯಲ್ಲಿ ಮೂಲಾವಿದ್ಯೆಯು (ಅಧ್ಯಾಸಕ್ಕೆ ಉಪಾದಾನ ಕಾರಣವಾದ ಅವಿದ್ಯೆಯೆಂದವರ ಅಭಿಪ್ರಾಯವು) ಇಲ್ಲವೆಂದು ತಿಳಿಯುವದು ಹೇಗೆ ?

2 ಸತ್ತಿನಲ್ಲಿ ಸಂಪತ್ತಿಯಾದರೂ ಸತ್ತಿನಲ್ಲಿ ಸಂಪನ್ನರಾಗಿ ಇದ್ದೇವೆ ಎಂದು ಅರಿಯದೆ ಇರುವರು"ಎಂದೂ, ಸತ್ತಿನಿಂದಾ ಬಂದಿದ್ದರೂ ಸತ್ತಿನಿಂದ ಬಂದಿರುತ್ತೇವೆ ಎಂದು ಅರಿಯದೆ ಇರುವರು” ಎಂದು ಶ್ರುತಿಯೇ ಬೋಧಿ ಸುತ್ತಿರುವದರಿಂದ ಅದಕ್ಕೆ ಕಾರಣವಾದ ಅವಿದ್ಯೆಯು ಇದೆ ಎಂಬುದೇ

ಭಾಷ್ಯಾರ್ಥವೆಂದು ನಿಶ್ಚಯವಾಗುತ್ತದೆ (ಸತಿಸಂಪದ್ಯನವಿದುಃ ಸತಿಸಂಪದ್ಯಾಮಹೇ ಇತಿ ಎಂದು ಶ್ರುತಿ ಛಾಂ ಉ 6-9-2). (2) (ಸತ ಆಗಮ್ಯನವಿದುಃ ಸತ ಆಗಚ್ಛಾಮಹೇ ಇತಿ॥ ಎಂದು ಶ್ರುತಿ ಛಾಂ ಉ 6-10-2).

3 ಸುಷುಪ್ತಿಯಲ್ಲಿ ಅವಿದ್ಯೆಯು ಇಲ್ಲವೆಂದಾದರೆ ಅವಿದ್ಯೆಯು ಸಮ್ಯಕ್ ಜ್ಞಾನವೆಂಬುದಿಲ್ಲದೆ ತನ್ನಷ್ಟಕ್ಕೆ ತಾನೇ ನಾಶವಾಗುವದೆಂದಾಗಿ ಶಾಸ್ತ್ರಾನರ್ಥಕ್ಯನೆಂಬ ದೋಷವು ಪ್ರಾಪ್ತವಾಗುವದು ಆದರಿಂದ ಮೂಲಾವಿದ್ಯೆಯು ಸುಷುಪ್ತಿಯಲ್ಲಿ ಇರುವದೆಂಬುದೇ ಯುಕ್ತವು

4 ಬ್ರಹ್ಮವು ಪರಮಾರ್ಥ ಅಪರಮಾರ್ಥವೆಂಬ ಎರಡು ರೂಪಗಳಿಂದ ಕೂಡಿರುವನೆಂದು ಮೇಲೆಯೇ ವಿವರಿಸಲಾಯಿತು ಅವನಿಗೆ ಅವಿದ್ಯಾಕಲ್ಪಿತವಾದ (ರಜ್ಜುಸರ್ಪದಂತಿರುವ) ಮೂರವಸ್ಥೆಗಳನ್ನು ಪರಮಾತ್ಮನಿಗೆ ಮೂರು ಪಾದಗಳೆಂದು ವಿಂಗಡಿಸಿ ಅಪರಪೂರ್ಣರೂಪವೆಂದು ತಿಳಿಸಿ ಕಳೆದದ್ದಾಯಿತು ಇನ್ನು ಪ್ರಜ್ಞಾನಘನವಲ್ಲದ (ಯಾವ ವಿಷಯ ಪ್ರಜ್ಞೆಯೂ ಇಲ್ಲದಿರುವ) ಸುಷುಪ್ತಾವಸ್ಥೆಯನ್ನು ಅಲ್ಲಗಳೆದಿರುತ್ತದೆ (ಮಾಂ ಉ ಮಂ 7) ಏಕೆಂದರೆ ಆ ಸುಷುಪ್ತಾವಸ್ಥೆಯು 'ಬೀಜಭಾವ ಅವಿವೇಕರೂಪವಾಗಿರುವದರಿಂದ" ಎಂಬ ಹೇತುವನ್ನು ಕೊಟ್ಟು ಭಾಷ್ಯವು ಬೋಧಿಸುತ್ತದೆ ಆದರಿಂದ ಸುಷುಪ್ತಿಯಲ್ಲಿ ಅವಿದ್ಯೆಯು ಅವ್ಯಕ್ತವಾಗಿರುವದು ಎಂಬುದೇ ಭಾಷ್ಯಾರ್ಥವೆಂದು ನಿಶ್ಚಯವಾಗುತ್ತದೆ

5 ಅಧ್ಯಾಸ, ಅವಿದ್ಯೆಗಳು ಪರ್ಯಾಯ ಪದಗಳೆಂದು ಭಾವಿಸಿ ಸುಷುಪ್ತಿಯಲ್ಲಿ ಅಧ್ಯಾಸವಿಲ್ಲದ್ದರಿಂದ ಅವಿದ್ಯೆಯು ಇಲ್ಲವೆಂಬ ಅಭಿಪ್ರಾಯವಾದರೆ (ಮೂಲಾವಿದ್ಯಾ ನಿರಾಸವಾದಿಗಳಿಗೆ) ಅದೂ ಸರಿಯಲ್ಲ ಏಕೆಂದರೆ ಅಧ್ಯಾಸ ಅವಿದ್ಯೆಗಳು ಪರ್ಯಾಯ ಪದಗಳಲ್ಲ. ಮತ್ತೇನೆಂದರೆ ಇಲ್ಲಿ ಕಾರ್ಯಕಾರಣಭಾವವನ್ನು ಅಂಗೀಕರಿಸಿದೆ ಆಗ ಕಾರ್ಯವು ಲಯವಾದರೂ ಕಾರಣವು ಹಾಗೆಯೇ ಇರುವದೆಂಬುದು ಯುಕ್ತವೆಂಬ ನ್ಯಾಯವನ್ನನುಸರಿಸಿ ಭಾಷ್ಯವು ಬೋಧಿಸಿರುತ್ತದೆ (ಕಾರ್ಯಾಪ್ಯಯೇತು ಕಾರಣಸ್ಯ ಅವಸ್ಥಾನಂ ಯುಕ್ತಂ॥ ಎಂದು ಭಾಷ್ಯ.) ಆದರಿಂದ ಸುಷುಪ್ತಿಯಲ್ಲಿ ಅವಿದ್ಯೆಯು ಅವ್ಯಕ್ತವಾಗಿರುತ್ತದೆಂಬುದೇ ಯುಕ್ತವು (ಬ್ರ ಸೂ 2-3-14)

6 ಮತ್ತು ಅನಾದ್ಯನಂತವಾಗಿ ಸ್ವಾಭಾವಿಕವಾಗಿರುವ ಮಿಥ್ಯಾ ಪ್ರತ್ಯಯ ರೂಪವಾಗಿರುವ ಕರ್ತೃತ್ವ ಭೋಕ್ತೃತ್ವಗಳನ್ನುಂಟುಮಾಡುತ್ತಿರುವ ಈ ಅಧ್ಯಾಸವು ಪ್ರವೃತ್ತಿ ರೂಪವಾಗಿರುವದು ಪ್ರತ್ಯಕ್ಷವಾಗಿರುವದು— ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆದರೆ ಅವಿದ್ಯೆಯು ಪ್ರವರ್ತಕವೇ ಅಲ್ಲವೆಂದೂ, ಅನರ್ಥವಾದ ಅಧ್ಯಾಸಕ್ಕೆ ನಿಮಿತ್ತವಾಗಿರುವದೆಂದೂ ಭಾಷ್ಯವು ಬೋಧಿಸುತ್ತಿರುವಾಗ ಅಧ್ಯಾಸಾವಿದ್ಯೆಗಳಿಗೆ ಕಾರ್ಯ ಕಾರಣ ಭಾವವನ್ನು ಅಂಗೀಕರಿಸುವದೇ ಯುಕ್ತವಾಗಿರುತ್ತದೆ (ಅವಿದ್ಯೈವ ಪ್ರವರ್ತಿಕಾ । ವಸ್ತು ಸ್ವರೂಪಾ ವರಣಾತ್ಮಿಕಾ ಹಿಸಾ । ಪ್ರವರ್ತಕ ಬೀಜತ್ವಂತು ಪ್ರತಿಪದ್ಯತೇ ॥ ಎಂದು ಭಾಷ್ಯ (ಬೃ ಉ 1–4–17), ಅಯಂ ಅನಾದಿನಂತಃ ನೈಸರ್ಗಿಕೋಧ್ಯಾಸಃ ಮಿಥ್ಯಾ ಪ್ರತ್ಯಯ ರೂಪಃ ಕರ್ತೃತ್ವ ಭೋಕ್ತೃತ್ವ ಪ್ರವರ್ತಕಃ ಸಕಲ ಲೋಕ ಪ್ರತ್ಯಕ್ಷಃ ॥ ಎಂದೂ ಭಾಷ್ಯ ಅಧ್ಯಾಸ ಭಾಷ್ಯ.) ಅವಿದ್ಯೆಯು ಕಾರ್ಯ ರೂಪವಾಗಿರದೇ ಕಾರ್ಯವು ಲಯವಾಗಿ ಕಾರಣ ರೂಪದಿಂದ ಅವ್ಯಕ್ತವಾಗಿರುತ್ತದೆ ಅವ್ಯಕ್ತವಾದ ಮಾಯೆಯು ತಾದಾತ್ಮ್ಯವನ್ನು ಹೊಂದಿ ಬ್ರಹ್ಮಾಭಿನ್ನವಾಗಿರಲು ಬ್ರಹ್ಮವು ಏಕೋಽದ್ವಿತೀಯವೆಂಬ ಸಿದ್ಧಾಂತಕ್ಕೆ ಹಾನಿ ಇಲ್ಲ

7 ಸುಷುಪ್ತಿಯಲ್ಲಿ ತನಗೇನೊಂದೂ ಗೊತ್ತಾಗಲಿಲ್ಲವೆಂದೂ, ತಾನು ಸುಖವಾಗಿ ನಿದ್ರಿಸಿದೆನೆಂದೂ ಈ ವಿಷಯದ ಸ್ಮೃತಿ ಜಾಗ್ರತಯಲ್ಲಿ ಜೀವನಿಗೆ ಆಗುತ್ತಿರುವದು ಅನುಭವಿಸದ ಯಾವ ವಿಷಯವೂ ತನಗ ಸುಷುಪ್ತಿಯಲ್ಲಿ ಸರ್ವ ಕಾರಣಗಳು ಉಪರಮಿಸಿರುವದರಿಂದ ಯಾವ ವಿಷಯ ಜ್ಞಾನವು ತನಗೆ ಆಗುತ್ತಿಲ್ಲವಾದ್ದರಿಂದ ಅವಿದ್ಯೆಯು ತನ್ನ ಕಾರಣದಲ್ಲಿ ಲಯವಾಗಿ ಅವ್ಯಕ್ತವಾಗಿರುವದೆಂದೂ ನಿಶ್ಚಯಿಸಬಹುದಾಗಿದೆ

8 ಸುಷುಪ್ತಿಯಲ್ಲಿ ಜೀವನ ಅವಿದ್ಯಾ ವ್ಯವಹಾರವು ಲಯವಾಗಿರುವದೆಂದ ಮಾತ್ರಕ್ಕೆ ಸುಷುಪ್ತಿಯಲ್ಲಿ ಅವಿದ್ಯೆಯು ಇಲ್ಲವೆನಬಾರದು. ಏಕೆಂದರೆ ಸಮ್ಯಕ್ ಜ್ಞಾನವಿಲ್ಲದೆ ಮಿಥ್ಯಾ ಜ್ಞಾನ ನಿವೃತ್ತಿಯಾಗದು ಸಮ್ಯಕ್ ಜ್ಞಾನವು ಶಾಸ್ತ್ರಾಚಾರ್ಯೋಪದೇಶವಿಲ್ಲದೆ ಲಭಿಸದು ಗುರು ಬೋಧೆಯು ಜಾಗ್ರತಾವಸ್ಥೆಯಲ್ಲಿಯೇ ಆಗಬೇಕೆಂಬ ನಿಯಮವಿದೆ. ಬೋಧೆಯು ಸುಷುಪ್ತಿಯಲ್ಲಿ

ಸಾಧ್ಯವೇ ಇಲ್ಲ ಬೋಧೆಯು ಒಂದು ವೇಳೆ ಆಗಬಹುದೆಂದರೆ ಅದು ಸುಷುಪ್ತಿಯೇ ಆಗದೆಂದಾಗುವದು.

ಅವಿದ್ಯೆ ಎಂದರೆ ಆವರಣವು ಆವರಣದಿಂದ ಮರೆವು ಮರೆವು ಅವ್ಯಕ್ತವು ಕಾರ್ಯಕ್ಕೆ ಅದು ಹೇತುವು ಮರೆವು ಪ್ರವರ್ತಕವಲ್ಲ ಅದರಿಂದ ಸುಷುಪ್ತಿಯಲ್ಲಿ ಅದರ ವ್ಯವಹಾರವಿಲ್ಲದೆ ಮರೆವೆಯು ಅವ್ಯಕ್ತವಾಗಿರುತ್ತದೆಂದೇ ತಿಳಿಯ ಬೇಕು ಏಕೆಂದರೆ ಜಾಗ್ರತ್ತಿನಲ್ಲಿ ಮರಳಿ ಅದು ತೋರಿ ಕೊಳ್ಳುತ್ತಿದೆ ಅರಿವಿನಲ್ಲಿ ಮರವೆ ಇಲ್ಲ ಆದರೆ ಮರೆವೆಗೆ ಅನ್ಯಾಶ್ರಯವಿಲ್ಲ ಅರಿವಿನಿಂದಲೆ ಮರೆವೆಯು ವೇದ್ಯವಾಗುವದು ಯಾವ ವಿಷಯದ ಮರೆವೆ ಉಂಟಾಗುವದೋ ಆ ವಿಷಯದ ಅರಿವಿನಿಂದ ಆ ವಿಷಯದ ಮರೆವೆಯು ಹೋಗಿ ಆ ವಿಷಯದ ಜ್ಞಾನ ಉಂಟಾಗುವದು ಅನ್ಯ ವಿಷಯ ಜ್ಞಾನ ಉಂಟಾಗದು ಈ ರೀತಿಯಾಗಿ ಸುಷುಪ್ತಿಯಲ್ಲಿ ಅವಿದ್ಯೆಯು ಅವ್ಯಕ್ತವಾಗಿರುವದೆಂದು ನಿಶ್ಚಯವಾಗುತ್ತದೆ

9 ಸುಷುಪ್ತಿಯಲ್ಲಿ ಅವಿದ್ಯೆಯು ಅವ್ಯಕ್ತವಾಗಿದ್ದರೂ ಪ್ರಾಜ್ಞ ನನ್ನಂಟದು. ಏಕೆಂದರೆ ಪರಮೇಶ್ವರನು ಯಾವಾಗಲೂ ಅವಿದ್ಯೆಯೇ ಇಲ್ಲದವನು (ನಿತ್ಯ ನಿವೃತ್ತಾ ವಿದ್ಯತ್ವಾತ್ ಈಶ್ವರಸ್ಯ ॥ ಎಂದು ಭಾಷ್ಯ ಬ್ರ. ಸೂ 3–2–9) ಅನಾವರಣ ಜ್ಞಾನ ಸ್ವರೂಪನು ಪ್ರಾಜ್ಞನು ಪರಮೇಶ್ವರನೆಂದು ಹೇಳಿದೆ (ಪ್ರಾಜ್ಞಸ್ತು ಪರಮೇಶ್ವರಃ ॥ ಎಂದು ಭಾಷ್ಯ ಬ್ರ: ಸೂ: 1–3–42) ಅವನು ಸರ್ವಜ್ಞನು. ಅದು ವಿಯೋಗವಾಗದ ನಿತ್ಯ ಸರ್ವಜ್ಞತ್ವವು ಅದರಿಂದ ಸುಷುಪ್ತಾತ್ಮನಾದ ಪ್ರಾಜ್ಞನು ಪರಮಾತ್ಮನೆಂದೂ, ಅದೇ ಜೀವನ ನಿಜ ರೂಪವೆಂದೂ, ಶ್ರುತಿಗಳೆಲ್ಲವೂ ಘೋಷಿಸುತ್ತಿಹವು

ಅವನು ಸುಷುಪ್ತಿಯಲ್ಲಿ ಮಾತ್ರ ಪರಮೇಶ್ವರನೆಂದಲ್ಲ ಮತ್ತೇನೆಂದರೆ ಮೂರವಸ್ಥೆಗಳಲ್ಲಿಯೂ ಅವನು ಜ್ಞಾನ ಸ್ವರೂಪನೇ. ನಿರ್ವಿಕಾರನೇ. ಜಾಗ್ರತ್ತಿನಲ್ಲಿಯೂ ಅವನು ಅದೇ ಶುದ್ಧ ಜ್ಞಾನ ಸ್ವರೂಪನೇ ಇದು ಎಲ್ಲರಿಗೂ ತಿಳಿದ ವಿಷಯವೇ. ಒಬ್ಬನು ಮತ್ತೊಬ್ಬನನ್ನು ಕಂಡು ಕೋಪದಿಂದ "ನಿನಗೇನು ಜ್ಞಾನವಿಲ್ಲವೇ ?" ಎಂದು ಬೈದರೆ ಅದನ್ನು ಸಹಿಸಲಾರದೆ "ಎಲೋ ! ಜ್ಞಾನವಿಲ್ಲವೆನ್ನುತ್ತೀಯಾ ! ನಿನಗಿಲ್ಲ. ನಿಮ್ಮಪ್ಪನಿಗಿಲ್ಲ ಜ್ಞಾನ !

ಎಂದು ಅವನನ್ನು ತಾನೂ ಗದರಿಸುತ್ತಾನೆ. ಅದರಿಂದ ಜಾಗ್ರತ್ತಿನಲ್ಲಿ ಅವಿದ್ಯೆಯಿಂದ ದೇಹಾತ್ಮಾಧ್ಯಾಸದಿಂದ ಕರ್ಮಾನುಗುಣ್ಯವಾಗಿ ಪ್ರವರ್ತಿಸಿ ದಶೇಂದ್ರಿಯಗಳ ದ್ವಾರಾ ಶಬ್ದಾದಿ ವಿಷಯಗಳನ್ನು ಗ್ರಹಿಸುತ್ತಾ ಸುಖ ದುಃಖಾನ್ವಿತನಾಗಿ ವ್ಯವಹರಿಸುತ್ತಾ ಅದು ತನ್ನ ಬೇರೆ ರೂಪವೆಂದು ತಿಳಿಯುತ್ತಾನೆ. ಕನಸಿನಲ್ಲಿಯೂ ಇದೇ ಜ್ಞಾನ ಸ್ವರೂಪನು ಹಾಗೆಯೇ ತಿಳಿಯುತ್ತಿರುವನು. ಹೀಗೆ ಉಪಾಧಿಯಿಂದ ವಿಶ್ವ, ತೈಜಸರು (ಜಾಗ್ರತ್ ಸ್ವಪ್ನದಲ್ಲಿರುವವರು) ವಿಷಯೋಪೇತರಾಗಿ ತಾವು ಬೇರೆ ಎಂದು ತಿಳಿಯುತ್ತಿರುವರು

ಅದರಿಂದ ಸುಷುಪ್ತಿಯಲ್ಲಿ ಅವಿದ್ಯೆಯು ತನ್ನ ಕಾರಣವಾದ ಪ್ರಕೃತಿಯಲ್ಲಿ ಅಡಗುವದು ಎಂದರೆ ಅವ್ಯಕ್ತವಾಗಿರುವದೆಂದರ್ಥ ಇದೇ ಯುಕ್ತವು

10 ಮನಸ್ಸು ಮಾಯಾ ಕಾರ್ಯವೇ ಮನೋ ವ್ಯಾಪಾರವು ನಿದ್ರಾವಶದಿಂದ ಸೂಕ್ಷ್ಮವಾಗಿ ಮನಸ್ಸು ತನ್ನ ಕಾರಣವಾದ ಮಾಯೆಯಲ್ಲಿ ಅಡಗುವದು "ಆತ್ಮನಃ ಮಾಯಾ ಅವಿದ್ಯಾ" ಎಂದು ಭಾಷ್ಯವು ಪ್ರಕೃತಿ, ಶಕ್ತಿ, ಮಾಯಾ ಎಂಬಿವು ಪರ್ಯಾಯ ಪದಗಳು ಪ್ರಕೃತಿಯು ಪರಮಾತ್ಮನ ಸ್ವರೂಪವೇ (ಯಾ ಮೂಲ ಪ್ರಕೃತಿ ಅಭ್ಯುಪಗಮ್ಯತೇ ತದೇ ವಚನೋ ಬ್ರಹ್ಮ ಇತ್ಯ ವಿರೋಧಃ॥ ಎಂದು ಭಾಷ್ಯವು. ಬ್ರ ಸೂ· 2–3–9.) ಅದರಿಂದ ಮನಸ್ಸು ಪ್ರಕೃತಿಯಲ್ಲಿ ಅಡಗುವದೆಂದು ಹೇಳಿದರೂ, ಬ್ರಹ್ಮದಲ್ಲಿ ಅಡಗುವದೆಂದರೂ ಒಂದೇ "ಅಸಂಗೋ ಹ್ಯಯಂ ಪುರುಷಃ' ಎಂದು ಶ್ರುತಿ ಪರಮಾತ್ಮನು ಅಸಂಗ ಚಿದ್ರೂಪನೆಂದೂ, ಸರ್ವ ಸಾಕ್ಷಿ ಎಂದೂ ಹೇಳುತ್ತಿರುವದು ಯಾವ ಉಪಾಧಿಕೃತ ದೋಷವೂ ಅವನನ್ನಂಟುವದಿಲ್ಲವೆಂದೂ ಹೇಳಿದೆ "ಅವನು ಈ ಲೋಕಗಳನ್ನೆಲ್ಲಾ ಕೊಂದರೂ ಕೊಂದವನಲ್ಲವೆಂದೂ ಅದರಿಂದ ಬದ್ಧನೂ ಆಗುವದಿಲ್ಲ"ವೆಂದೂ ಗೀತೆಯು ಬೋಧಿಸುತ್ತದೆ (ಗೀ. ಅ· 18–17) ಮತ್ತು ಗೀತೆಯಲ್ಲಿ 10 ಮತ್ತು 11 ಅಧ್ಯಾಯಗಳು ಸಮಸ್ತ ಲೋಕಗಳು ಪರಮಾತ್ಮನಲ್ಲಿದ್ದರೂ ಅವುಗಳು ಅವನನ್ನಂಟುವುದಿಲ್ಲವೆಂದು ಹೇಳುವದಕ್ಕೆ ಸಾಕಾದಷ್ಟು ಪ್ರಮಾಣಗಳಾಗಿವೆ. ಅದರಿಂದ ಮೂರವಸ್ಥೆಗಳ ಅನುಭವವು ಒಬ್ಬನಿಗೇ ಆಗುತ್ತಿರುವದರಿಂದ ಸುಷುಪ್ತಿಯಲ್ಲಿದ್ದ ಪ್ರಾಜ್ಞನೇ ಜಾಗ್ರತ್ತಿನಲ್ಲಿರುವ ವಿಶ್ವನೇಯಾಗುವನಾವನಾದ್ದರಿಂದ ಜಾಗ್ರತ್ತಿನ

ಬ್ಲಾಗುವ ಆತ್ಮ ಬೋಧೆಯಿಂದಲೇ ಸುಷುಪ್ತಿಯಲ್ಲಿ ಅವ್ಯಕ್ತವಾಗಿದ್ದ ಅವಿದ್ಯೆಯು ನಾಶವಾಗಿ ಸಮ್ಯಕ್‌ಜ್ಞಾನವಾಗಲು ಯಾವ ಅಭ್ಯಂತರವೂ ಇಲ್ಲ ಸುಷುಪ್ತಾತ್ಮನು ಪರಮಾತ್ಮನೆಂದಂಗೀಕರಿಸದಿದ್ದರೆ ದೇವರೇ ಸಿದ್ಧಿಸುವದಿಲ್ಲ. ಮತ್ತು "ತತ್ತ್ವಮಸಿ, ಅಯಮಾತ್ಮಾ ಬ್ರಹ್ಮ", ಮುಂತಾದ ಶ್ರುತಿಗಳು ವ್ಯರ್ಥವಾದಾಗಿ ಶಾಸ್ತ್ರಾನರ್ಥಕ್ಯವೆಂಬ ದೋಷವು ಪ್ರಾಪ್ತವಾಗುವದು ಆದರಿಂದ ಸುಷುಪ್ತಾತ್ಮನು ಪರಮಾತ್ಮನು ನಿರ್ಮಲನು ನಿರ್ವಿಕಾರನು ಸರ್ವಜ್ಞನು. ಸರ್ವಶಕ್ತನು ಜಗತ್ಕಾರಣನು ಏಕೋಽದ್ವಿತೀಯನು ಎಂದು ಶ್ರುತಿ ಸ್ಮೃತ್ಯಾಧಾರಗಳಿಂದ ಸಮರ್ಥಿಸಿ ನಿರೂಪಿಸಲಾಯಿತು ಪರಮಾತ್ಮನನ್ನು ಬಿಟ್ಟು ಬೇರೆ ಜೀವನೆಂಬುವನೇ ಇಲ್ಲವೆಂಬುದನ್ನು ನಿಶ್ಚಯಿಸಿ ನಿರೂಪಿಸಲಾಯಿತು ಜೀವಭಾವದಿಂದ ವ್ಯವಹರಿಸುತ್ತಿರುವನು ಪರಮಾತ್ಮನೇ ಜೀವಭಾವವು ಉಪಾಧಿಕೃತವು "ನಾನ್ಯೋಽತೋಽಸ್ತಿದ್ರಷ್ಟಾ, ನಾನ್ಯೋಽತೋಽಸ್ತಿ ಶ್ರೋತಾ ನಾನ್ಯೋಽತೋಽಸ್ತಿ ಮಂತಾ ನಾನ್ಯೋಽತೋಽಸ್ತಿವಿಜ್ಞಾತಾ" ಎಂಬ (ಬೃ ಉ 174-3-7-23) ಶ್ರುತಿಯು ಇದಕ್ಕೆ ಪ್ರಮಾಣವು. ನಸವಿವ ಸಾಕ್ಷಾತ್ ನಾಪಿ ವಸ್ತ್ವಂತರಂ। ಎಂದು ಭಾಷ್ಯ॥ (2-3-50)

## — 6. ಅದ್ವೈತ ಸಿದ್ಧಿ : —

ಈ ರೀತಿಯಲ್ಲಿ ಅದ್ವೈತವೇ ಶ್ರುತಿಗಳಿಗೆಲ್ಲಾ ತಾತ್ಪರ್ಯವೆಂದು ಶ್ರುತಿ ಸ್ಮೃತ್ಯಾಧಾರಗಳಿಂದ ನಿರೂಪಿಸಲಾಯಿತು. ಸೃಷ್ಟಿಗೆ ಪೂರ್ವದಲ್ಲಿ ಪರಮಾತ್ಮನೊಬ್ಬನೇ ಏಕೋಽದ್ವಿತೀಯನಾಗಿದ್ದನೆಂದು ನಿರೂಪಿಸಿ ಈ ವಿಚಿತ್ರ ವಿಶಿಷ್ಟ ಪ್ರಪಂಚವು ಅವನಿಂದಲೆ ಸೃಜಿಸಲ್ಪಟ್ಟು ಸ್ಥಿತಿಯುಳ್ಳದ್ದಾಗಿ ನಿಯತ ಕಾಲಾನಂತರ ಅವನಲ್ಲಿಯೇ ಲಯವಾಗಿ ಶಕ್ತ್ಯವಶೇಷವಾಗಿ ಬ್ರಹ್ಮಾಭಿನ್ನವಾಗಿ ಹಿಂದಿನಂತೆಯೇ ಅವ್ಯಕ್ತವಾಗಿರುವದೆಂದೂ, (ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ। ಅವ್ಯಕ್ತ ನಿಧನಾನ್ಯೇವತತ್ರ ಕಾಪರಿದೇವನಾ ?॥ ಎಂದು ಗೀತೆ). "ಧಾತಾಯಥಾಪೂರ್ವಮಕಲ್ಪಯತ್" ಎಂಬ ಶ್ರುತಿ ರೀತ್ಯಾ ಪುನಃ ಅದೇ ಶಕ್ತಿಮೂಲಕವಾಗಿಯೇ ಸೃಷ್ಟ್ಯಾದಿಗಳು ಆಗುತ್ತಿರುವವೆಂದೂ : "ಕಾರ್ಯಸ್ಯಕಾರಣಾತ್ ಅನನ್ಯತ್ವಂ" ಎಂಬ ನ್ಯಾಯದಂತೆ ಸಮಸ್ತ ಜಗತ್ತು

ಬ್ರಹ್ಮದ ಕಾರ್ಯವೆಂದೂ ಬ್ರಹ್ಮವೇ ಕಾರಣವೆಂದೂ, ಕಾರ್ಯಕಾರಣಗಳನನ್ಯವೆಂದೂ, ಅದರಿಂದ ಜಗತ್ತು ಬ್ರಹ್ಮಾಭಿನ್ನವೆಂದೂ-ಎಂದರೆ ಬ್ರಹ್ಮಸ್ವರೂಪವೇ ಯೆಂದೂ-ಜಗತ್ತು ಬ್ರಹ್ಮಗಳಿಗೆ ಏಕತ್ವವನ್ನು ಸಾಧಿಸಿ ನಿರೂಪಿಸಲಾಗಿದೆ. ಶತಪರ್ವಗಳಾದರೂ ಕಾರ್ಯವು ಕಾರಣಕ್ಕಿಂತ ಬೇರೆಯೆಂದು ಸಾಧಿಸಲು ಶಕ್ಯವಲ್ಲೆಂದೂ ಹೇಳಿದೆ. ಶಕ್ತಿಯು ಕಾರಣಸ್ವರೂಪವು. ಕಾರ್ಯವು ಶಕ್ತಿಸ್ವರೂಪವು. ಅದರಿಂದ ಜಗತ್ತು ತ್ರಿಕಾಲದಲ್ಲಿಯೂ ಬ್ರಹ್ಮವನ್ನು ಬಿಟ್ಟು ಭಿನ್ನಸತ್ತಾಉಳ್ಳದ್ದಲ್ಲ. ಜಗತ್ತುಬ್ರಹ್ಮಗಳಿಗೆ ಸತ್ತ್ವವು ಒಂದೇ. (ಆತ್ಮೈಕ ಶಬ್ದ ಪ್ರತ್ಯಯ ಗೋಚರಂಜಗತ್॥ ಎಂದು ಭಾಷ್ಯ ೨: ೧:)

ಬ್ರಹ್ಮವೇ ಉಪಾಧಿಯಿಂದ ವ್ಯವಹರಿಸಿ ಜೀವವೆನಿಸಿರುವನೆಂದೂ, ಜ್ಞಾನದಿಂದ ಅವಿದ್ಯೋಪಾಧಿ ನಾಶವಾಗಿ ಅವನೇ ತನ್ನ ನಿಜರೂಪವನ್ನರಿತು ತಾನಾಬ್ರಹ್ಮವೆಂದೂ ತಿಳಿಯುವನೆಂದು ನಿರೂಪಿಸಲಾಯಿತು. ಅದರಿಂದ ಬ್ರಹ್ಮವೇ ಜಗದಾಕಾರವನ್ನು ಹೊಂದಿ ಜ ದ್ರೂಪನಾಗಿಯೂ, ಉಪಾಧಿವಶನಾಗಿ ವ್ಯವಹರಿಸಿ ಜೀವನಾಗಿ ಕಾಣಿಸುವನೇ ಹೊರತು ಎಲ್ಲವೂ ಆ ಬ್ರಹ್ಮಸ್ವರೂಪವೇ. ಅವಿದ್ಯಾಧ್ಯಾರೋಪಿತವಾದ ಕರ್ತೃತ್ವ ಭೋಕ್ತೃತ್ವರೂಪ ಸಂಸಾರಿತ್ವವು ಮತ್ತು ಜೀವಭಾವವು ಜ್ಞಾತೃವಿಗೆ ಯಾವ ದೋಷವನ್ನೂ ಉಂಟುಮಾಡುವುದಿಲ್ಲ. ಸರ್ವಶರೀರಗಳಲ್ಲಿ ವ್ಯಾಪಕನಾಗಿರುವ ಪರಮಾತ್ಮನಿಗೆ ಸಂಸಾರ ವಾಸನೆಯು ಉಂಟಾಗದು. ಬ್ರಹ್ಮವು ಅಸಂಗ ಚಿದ್ರೂಪವು ಅವಿದ್ಯಾಧ್ಯಸ್ತವಾದ ಧರ್ಮದಿಂದ ಯಾವದಕ್ಕೂ ಯಾವ ಉಪಕಾರವಾಗಲಿ ಅಪಕಾರವಾಗಲಿ, ಆಗುವದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲವೆಂದು ಭಾಷ್ಯವು ಬೋಧಿಸುತ್ತಿಹುದು. ಅದರಿಂದ ಜೀವನೂ ಬ್ರಹ್ಮಸ್ವರೂಪವೇ ಎಂದಾಯಿತು. ಅದರಿಂದ ಎಲ್ಲವೂ ಬ್ರಹ್ಮಸ್ವರೂಪವೆಂದು ಸಿದ್ಧಿಸುತ್ತದೆ. ('ತತ್ತ್ವಮಸಿ : ಅಯಮಾತ್ಮಾ ಬ್ರಹ್ಮ; 'ತದ್‌ಬ್ರಹ್ಮಸ ಆತ್ಮಾ' ಇತ್ಯಾದಿ ಶ್ರುತಿಗಳು ಇದಕ್ಕೆ ಪ್ರಮಾಣವು.) ಅದರಿಂದ ಎಲ್ಲವೂ ಬ್ರಹ್ಮಸ್ವರೂಪವೆಂಬುದೇ ಉತ್ಯಂತ ಸಿದ್ಧಾಂತವು. ಇದೇ ಭಾಷ್ಯಸಮ್ಮತವು.

# ಉಪ ಸಂಹಾರವು

ಶಾಸ್ತ್ರಜ್ಞನಾಗಿ ಶಾಸ್ತ್ರ ಸಿದ್ಧಾಂತವನ್ನರಿತು ವಿದ್ವಾಂಸನಾದ ಮಾತ್ರಕ್ಕೆ ಅವನು ಜೀವನ್ಮುಕ್ತನಾಗಲಾರನು ನರ ಭಾವವನ್ನು ನೀಗಿ ನಿರಾಕಾರ ಬ್ರಹ್ಮ ಪದವು ಸಿದ್ಧಿಸಿರಬೇಕು. ಸ್ವಸ್ವರೂಪಾನು ಸಂಧಾನವನ್ನು ಮಾಡುವದೇ ಭಕ್ತಿ ಎಂದು ಅರಿತಿರಬೇಕು ಆ ಭಕ್ತಿಯು ದೃಢವಾಗಿರಬೇಕು ಇಲ್ಲದಿದ್ದರೆ ಅವನು ನಿರಂತರವು ಬ್ರಹ್ಮ ಸ್ವರೂಪವೇ ಆಗಿರುವದು ಹೇಗೆ ? ಸರ್ವ ದುಃಖ ನಿವೃತ್ತಿ ದ್ವಾರಾ ಪರಮಾನಂದ ಪ್ರಾಪ್ತಿಯೇ ಮೋಕ್ಷವು ಅದು ಜ್ಞಾನದಿಂದಲೆ ಸಾಧ್ಯ (ಜ್ಞಾನಾ ದೇವತು ಕೈವಲ್ಯಂ ॥ ಎಂದು ಶ್ರುತಿ.) ವೈರಾಗ್ಯವಿಲ್ಲದೆ ಜ್ಞಾನವು ದೃಢವಾಗದು. ನಿಜವಾಗಿ ದೃಢವಾದ ವಿರಕ್ತನಾಗಿರಬೇಕು ಅವನೇ ಮುಕ್ತಿಗಧಿಕಾರಿ ಧನದಾರ ಸುತಾದಿಗಳೆಂಬ ಈಷಣತ್ರಯವನ್ನು ಬಿಟ್ಟ ಸಂನ್ಯಾಸಿಗೇ ಮೋಕ್ಷವು (ಯತೇರೇವ ಮೋಕ್ಷ ಪ್ರಾಪ್ತಿಃ ॥ ಎಂದು ಭಾಷ್ಯ.) “ಮೂಲ ಹಮ್ಮೆಲ್ಲ ಲಯವಾಗಿ । ಉಳಿಯದೆ ತಾನು । ಸುಮ್ಮನೇ ಬ್ರಹ್ಮನಾಗುವನೇ?” ಎಂದು ಆರ್ಯೋಕ್ತಿ ಇಂಥ ಬ್ರಹ್ಮಾ ಪರೋಕ್ಷ ಜ್ಞಾನವು ಪರಮ ಗುರುವಿನ ಅನುಗ್ರಹವಿಲ್ಲದೆ ಲಭ್ಯವಾಗದು ಬರಿಯ ಶಾಸ್ತ್ರ ಜ್ಞಾನವನ್ನು ಹೊಂದಿದವನಾದರೂ ಅವನು ಜೀವನ್ಮುಕ್ತನಲ್ಲ. ಅದರಿಂದಲೆ ಶಾಸ್ತ್ರಜ್ಞನಾದರೂ ಗುರುವಿಲ್ಲದೆ ಬ್ರಹ್ಮ ಜ್ಞಾನಾನ್ವೇಷಣೆಯನ್ನು ಮಾಡಬಾರದೆಂದು ಭಾಷ್ಯವು ಬೋಧಿಸುತ್ತಿರುವದು (ಶಾಸ್ತ್ರಜ್ಞೋಽಪಿ ನ ಸ್ವಾತಂತ್ರ್ಯೇಣ ಬ್ರಹ್ಮ ಜ್ಞಾನಾನ್ವೇಷಣಂ ಕುರ್ಯಾತ್॥ ಎಂದು ಭಾಷ್ಯ. ಮುಂ ಉ 1-2-12) ಅದರಿಂದ ಗುರುವರನು ಪ್ರತ್ಯರ್ಥವನ್ನ ತಿಳಿತಿರುವನಲ್ಲದೆ ಬ್ರಹ್ಮ ನಿಷ್ಠನಾಗಿ ಮಹಾ ವೈರಾಗ್ಯಸಂಪನ್ನನಾಗಿರಬೇಕು ಮುಮುಕ್ಷು ಜನ ಹಿತಾರ್ಥವಾಗಿ ಶಾಸ್ತ್ರವು ಪರಮಾತ್ಮನನ್ನು ಹೀಗೂ ಬೋಧಿಸಿರುವದು ಅದೆಂತೆಂದರೆ—ಪರಮಾತ್ಮನು ಸಾಕರನೆಂತಲೂ ನಿರಾಕಾನೆಂತಲೂ ಎರಡು ವಿಧವಾಗಿ ವೇದಾಂತ ಶಾಸ್ತ್ರದಲ್ಲಿ ಸಾಕಾರವನ್ನು ಉಪಾಸನಾರ್ಥವಾಗಿಯೂ, ನಿರಾಕಾರವನ್ನು ಜ್ಞೇಯಾರ್ಥವಾಗಿಯೂ ಉಪದೇಶ ಮಾಡಲ್ಪಟ್ಟಿರುವದು ಇವೆರಡೂ ಸತ್ಯವೆಂದು ಹೇಳಲ್ಪಟ್ಟಿರುವದಿಲ್ಲ ಈಶ್ವರನು ಸಾಕಾರನೆಂದು ಕಲ್ಪಿಸ ತಕ್ಕವನಲ್ಲ. ಏಕಂದರೆ—ಶಾಸ್ತ್ರವು “ಸ್ಥೂಲವಲ್ಲದ್ದು, ಶಬ್ದ ಸ್ಪರ್ಶಗಳಿಲ್ಲದ್ದು, ಅಣುವಲ್ಲದ್ದು, ಅವ್ಯಯವಾದದ್ದು, ನಾಮ

ರೂಪಗಳಿಲ್ಲದ್ದು" ಎಂದು ಇನ್ನು ಅನೇಕ ವಿಧವಾಗಿ ನಿಷ್ಪ್ರಪಂಚನಾದ ಬ್ರಹ್ಮಾತ್ಮ ತತ್ವವನ್ನೇ ನಿರ್ವಿಶೇಷವೆಂದು ಪ್ರಧಾನವಾಗಿ ತಿಳಿಸುತ್ತದೆ ಆದರಿಂದ ಶ್ರುತಿಗಳನ್ನನುಸರಿಸಿ ಬ್ರಹ್ಮವು ನಿರಾಕಾರವೆಂದೇ ನಿಶ್ಚಯಿಸ ಬೇಕು

ಇಷ್ಟು ಮಾತ್ರದಿಂದ ಸಾಕಾರವನ್ನು ಹೇಳುವ ವಾಕ್ಯಗಳನ್ನು ನಿಷ್ಪ್ರಯೋಜನವೆಂದು ತಿಳಿಯಬಾರದು ಅವು ಉಪಾಸನಾ ವಿಧಿಗೆ ಪ್ರಧಾನವೆಂದು ತಿಳಿಯಬೇಕು ಅವುಗಳಲ್ಲಿ ವಿರೋಧವಿಲ್ಲದಿದ್ದರೆ ಅವುಗಳನ್ನು ಹಾಗೆಯೇ ಅನುಸರಿಸಬೇಕು ವಿರೋಧವು ಕಂಡು ಬಂದರೆ ನಿರಾಕಾರ ಪ್ರಧಾನವಾಗಿರುವ ವಾಕ್ಯಗಳು ಸಾಕಾರ ಪರವಾದ ವಾಕ್ಯಗಳಿಗಿಂತ ಪ್ರಬಲವೆಂದೇ ನಿಶ್ಚಯಿಸಬೇಕು. ಅದಕ್ಕೆ ವಿಪರೀತವಾಗಿ ನಿಶ್ಚಯಿಸ ಬಾರದೆಂಬುದೇ ಶಾಸ್ತ್ರ ಸಿದ್ಧಾಂತವು. (ಬ್ರ: ಸೂ 3-2-14 '—ಅರೂಪವದೇವ ತತ್ಪ್ರಧಾನಾತ್ ॥ ಸೂ ॥.)

ಬ್ರಹ್ಮವೆಂದರೂ ಆತ್ಮನೆಂದರೂ ಒಂದೇ. ಆತ್ಮನು ಶುದ್ಧ ಜ್ಞಾನ ಸ್ವರೂಪನೆಂದೂ ನಿರಾಕಾರನೆಂದೂ ಸಿದ್ಧಿಸಿರುವದರಿಂದ ಆತ್ಮನು ಸರ್ವ ವ್ಯಾಪಕನೆಂದೂ ನಿಶ್ಚಯವಾಗುತ್ತದೆ ಅವನು ನಿತ್ಯ ಚೈತನ್ಯ ಸ್ವರೂಪನು ಸರ್ವ ಪ್ರಾಣಿಗಳಲ್ಲಿರುವ ತೇಜಸ್ಸು ಅವನದೇ. ತ್ರಿಮೂರ್ತಿಗಳಲ್ಲಿರುವವನು ಅವನೇ. ಇದರಿಂದ ಅವನು ಸರ್ವಜ್ಞನೆಂದೂ ಸರ್ವಶಕ್ತನೆಂದೂ ತಿಳಿಯಬಹುದಾಗಿದೆ ಈ ದೇಹದೊಳಗಿರುವ ಆತ್ಮನು ಶುದ್ಧ ಜ್ಞಾನಮಯನಾಗಿರುವದರಿಂದ 'ನಾನು, ನಾನು' ಎಂದು ವ್ಯವಹರಿಸುತ್ತಿರುವನು ಹರಿಹರಾದಿಗಳಲ್ಲಿಯು ಈ ಜ್ಞಾನವು ಇಲ್ಲದಿದ್ದರೆ ಅವರಿಗೂ 'ನಾನು ನಾನು' ಎಂದು ಹೇಳಿ ವ್ಯವಹರಿಸಲಾಗುವದಿಲ್ಲ ಸುರಾಸುರರಲ್ಲಿಯೂ, ಜಲ ಚರಗಳಲ್ಲಿಯೂ ಘೋರ ಮೃಗಗಳಲ್ಲಿಯೂ, ನರ ಪಶು ಪಕ್ಷಿ ಕ್ರಿಮಿ ಕೀಟಗಳಲ್ಲಿಯೂ ಈ ಜ್ಞಾನವಿಲ್ಲದಿದ್ದರೆ 'ನಾನು ನಾನು', ಎಂದು ಯಾವ ವ್ಯವಹಾರವೂ ಉಂಟಾಗುತ್ತಿರಲಿಲ್ಲ. ಜಡ ಪದಾರ್ಥಗಳ ಸೃಷ್ಟಿಯು ಜ್ಞಾನದಿಂದಲೇ ಆಗುತ್ತಿರುವದೆಂಬುದು ಸ್ಪಷ್ಟವು. ಜ್ಞಾನವಿಲ್ಲದೆ ಜೀವಭಾವವೂ ಇಲ್ಲ ದೇವಭಾವವೂ ಇಲ್ಲ ಜಗತ್ತೂ ಇಲ್ಲ. ಆತ್ಮನೇ ತನ್ನ ಸ್ವರೂಪ ಹಾನಿ ಇಲ್ಲದೆ ಎಲ್ಲವೂ ತಾನೇ ಆಗಿರುವನು

ದೇವರು ವೈಕುಂಠದಲ್ಲಿರುವ ಮಹಾ ವಿಷ್ಣುವೇ ಆಗಿರಲಿ, ಗಜ

ಚರ್ಮಾಂಬರಧರನಾಗಿ ಭಿಕ್ಷುಕನಾಗಿ ಸ್ಮಶಾನವಾಸಿಯೆನಿಸಿ ಕೈಲಾಸವಲ್ಲಿರುವ ಶಿವನೇ ಆಗಿರಲಿ ದೇವಸ್ಥಾನಗಳಲ್ಲಿರಲಿ ಬೃಂದಾವನಗಳಲ್ಲಿರಲಿ ಬ್ರಹ್ಮ ಲೋಕದಲ್ಲಿರುವ ಬ್ರಹ್ಮನೇ ಆಗಿರಲಿ, ಪುಣ್ಯ ತೀರ್ಥಗಳಲ್ಲಿರಲಿ, ಕಲ್ಲಿನಲ್ಲಿರಲಿ ಮರಗಿಡಗಳಲ್ಲಿರಲಿ ಯಾವವರಲ್ಲಿದ್ದರೂ, ಎಲ್ಲಿದ್ದರೂ ಹೇಗಿದ್ದರೂ ಅದು ದೇವರು ಎಂದು ತನ್ನ ಹೃದಯಕ್ಕೆ ಬಾರದೇ ಇದ್ದರೆ ಅದು ದೇವರೇ ಆಗುವದಿಲ್ಲ ದೇವರಿಗೆಂದು ಒಡವೆಗಳನ್ನು ಮಾಡಿಸಿಟ್ಟಿದ್ದರೆ ಅದನ್ನು ಕದಿಯಲು ಬಂದ ಕಳ್ಳನಿಗೆ ಅದು ದೇವರೋ ಕಲ್ಲೋ? ಯಾರಾದರೂ ಹೇಳಲಿ ಅದರಿಂದ ಸರ್ವವ್ಯಾಪಕನಾದ್ದರಿಂದ ಯಾವದಾದರೂ ದೇವರಾಗಬಹುದು ನಿರಾಕಾರವೂ ಅವನೇ ಸಾಕಾರವೂ ಅವನೇ ಯಾವವನ್ನಾದರೂ ಆಗಲಿ ಅವನು ದೇವರೆಂದು ತಿಳಿದು ಮನಸ್ಸಿಗೆ ಒಪ್ಪಿ ಬಂದರೇನೇ ದೇವರಾಗುವದು. ಹಾಗ್ನಾದರೆ ನಿನ್ನ ಮನಸ್ಸು ಯಾವದನ್ನ ದೇವರೆಂದು ಒಪ್ಪಿ ಸಂತೋಷದಿಂದ ಭಜಿಸುವದೋ ಅದು ದೇವರೆಂದಾಗುವದಾದರೆ ಮನಸ್ಸಿನಲ್ಲಿದ್ದು ಮನೋವೃತ್ತಿಗೆ ಸಾಕ್ಷಿಯಾಗಿರುವ ಚೈತನ್ಯಾತ್ಮನು ದೇವರೆಂದು ಬೋಧಿಸುವ ಶ್ರುತಿಯು ಈ ವಿಷಯದಲ್ಲಿ ಏಕೆ ಪ್ರಮಾಣವಲ್ಲ? (ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ॥ ಎಂದು ಶ್ರುತಿ ॥) ಶಿವ ಭಕ್ತರಿಗೆ ಶಿವನೇ ದೇವರು ವಿಷ್ಣು ಭಕ್ತರಿಗೆ ವಿಷ್ಣುವೇ ದೇವರು ತತ್ತ್ವವೇತ್ತನಿಗೆ ಆತ್ಮನೇ ದೇವರು

ಮಣ್ಣಿನ ಬೊಂಬೆಗಳು, ಚಿತ್ರಪಟಗಳು ಬಿಂದಿಗೆ, ತಂಬಿಗೆ, ಪಂಚಪಾತ್ರೆ, ಮರಗಳು, ಸಗಣಿ, ಅಡಿಕೆ, ಬೆಂಕಿಯಲ್ಲಿ ಕಾಯಿಸಿ, ಕರಗಿಸಿ ಅಕ್ಕಸಾಲಿಗನು ಮಾಡಿರುವ ಲೋಹ ವಿಗ್ರಹಗಳು ಮುಂತಾದವೆಲ್ಲವೂ ದೇವರೆಂದು ಭಾವಿಸಿ ಪೂಜಿಸುವರಲ್ಲ! ಶ್ರುತಿ ಬೋಧಿಸುವ ಚೈತನ್ಯಾತ್ಮನು ದೇವರಲ್ಲವೇ? ಶ್ರುತಿಗಳನ್ನು ತಿರಸ್ಕರಿಸುವದು ಮಹಾಪಾಪ ಲೇಪವಲ್ಲವೇ? ದೇಹವು ದೇವಾಲಯವೆಂದೂ, ದೇಹದಲ್ಲಿರುವ ಜೀವನೇ ದೇವರೆಂದೂ—ಎಂದರೆ ಅಜ್ಞಾನವನ್ನು ಕಳೆದರೆ ಅವನೇ ದೇವರೆಂದೂ — ಬೋಧಿಸುವ ಶಾಸ್ತ್ರವನ್ನು ತಿರಸ್ಕರಿಸುವದು ಯುಕ್ತವೇ? "ಸರ್ವಭೂತಗಳ ಹೃದಯದಲ್ಲಿಯೇ ನಾನು ಇರುತ್ತೇನೆಂದು" ಭಗವಂತನು ಗೀತೆಯಲ್ಲಿ ಹೇಳಿರುವದನ್ನು ನೋಡಬಾರದೇ? ಬ್ರಹ್ಮನನ್ನು ತಿಳಿದವನು ಬ್ರಹ್ಮನಲ್ಲಿಯೇ ಇರುವನೆಂದು ಗೀತೆ ಬೋಧಿಸುವದನ್ನು ನೋಡಬಾರದೇ? (18–61, 5–20 ॥ ಎಂದು ಗೀತೆ.)

ಇಷ್ಟೇ ಅಲ್ಲ ಸೃಷ್ಟಿಗೆ ಪೂರ್ವದಲ್ಲಿ ಬ್ರಹ್ಮವು ಸತ್ಯಜ್ಞಾನಾನಂದ ಸ್ವರೂಪನಾಗಿ ತಾನೊಬ್ಬನೇ ಇದ್ದನೆಂದೂ, ತಾನು ತನ್ನನ್ನೇ 'ನಾನು ಬ್ರಹ್ಮ ನಾಗಿರುವೆ ನೆಂದು ತಿಳಿದುಕೊಂಡನೆಂದು ಆ ಶ್ರುತಿ ಬೋಧಿಸುತ್ತದೆ. (ಬೃ·ಉ ಅ 1–ಬ್ರಾ 4- ಮಂ 10) ಮತ್ತು ಅದೇ ಪರಮಾತ್ಮನು ಇದವೆನಿಸುವ ಎಲ್ಲವನ್ನು ಸೃಷ್ಟಿಸಿ ಅವುಗಳಲ್ಲಿ ಈ ಜೀವರೂಪದಿಂದ ತಾನೇ ಅನುಪ್ರವೇಶಿಸಿ ನಾನು', ನಾನು' ಎಂದು ವ್ಯವಹರಿಸುತ್ತಿರುವನೆಂದು ಮತ್ತೊಂದು ಶ್ರುತಿ ಬೋಧಿಸುತ್ತದೆ. (ಛಾಂ. ಉ. 6–3–2) ಗಂಡು, ಹೆಣ್ಣು ಇವರಿಬ್ಬರು 'ನಾನು' ಎಂದು ವ್ಯವಹರಿಸುತ್ತಿರುವರು ಅವರಲ್ಲಿ ದೇಹ ಭೇದವಿದೆಯೇ ಹೊರತು ಆತ್ಮ ಭೇದವಿಲ್ಲ. ಆದರಿಂದ 'ನಾನು' ಎಂಬುದು ಭಿನ್ನಸಿಲ್ಲ.

2 ಬ್ರಹ್ಮವು ಸೃಷ್ಟಿಗೆ ಪೂರ್ವದಲ್ಲಿ ಏಕೋಽದ್ವಿತೀಯನಾಗಿ ಇದ್ದನೆಂದು ಶ್ರುತಿ ಹೇಳುತ್ತಿರುವದರಿಂದ ಅವನು ಎಲ್ಲರೊಳು ಮೊದಲಿರುವ ಮಹಾ ಪುರುಷನೆಂದು ಉತ್ತಮ ಪುರುಷನೆಂದೂ ಸಿದ್ಧವಾಗುತ್ತದೆ

3 ವ್ಯಾಕರಣ ಶಾಸ್ತ್ರವು ಕೂಡ 'ನಾನು' ಎಂಬುದು (I person) ಉತ್ತಮ ಪುರುಷ 'ನೀನು' ಎಂಬುದು ಮಧ್ಯಮ ಪುರುಷ ನೆಂದೂ (II person) ಉಳಿದುದೆಲ್ಲಾ (III person) ಪ್ರಥಮ ಪುರುಷನೆಂದೂ ಹೇಳುತ್ತದೆ 'ನಾನು' ಎಂಬುದು ಸರ್ವ ವ್ಯಾಪಕವಾಗಿ, ಸರ್ವೋತ್ತಮವಾಗಿ, ಎಲ್ಲಕ್ಕಿಂತಲೂ ಅತಿ ಪ್ರಿಯವಾಗಿ, ಅವಿನಾಶಿಯಾಗಿ, ಅಪ್ರಮೇಯವಾಗಿ, ಅಸಂಸಾರಿಯಾಗಿ, ಅಸಂಗ ಚಿದ್ರೂಪನಾಗಿ, ಅಕರ್ತನಾಗಿ, ಅಭೋಕ್ತನಾಗಿ ನಿತ್ಯ ಶುದ್ಧ ಬುದ್ಧ ಮುಕ್ತನಾಗಿ ಸರ್ವಜ್ಞನಾಗಿ, ಸರ್ವ ಶಕ್ತ ನಾಗಿ ಸೃಷ್ಟಿಕರ್ತನಾಗಿರುವದರಿಂದ ಬ್ರಹ್ಮ ಸ್ವರೂಪವೆನಿಸಿರುವನು ಜೀವ ರೂಪದಿಂದಿರುವನು ಬ್ರಹ್ಮವೇ ಎಂದು ಮೇಲೆ ತಿಳಿಸಿದೆ ದೇಹ ಭೇದದಿಂದ ಜೀವರುಗಳನೇಕರು. ಅವನೇ ಗಜ, ಸಿಂಹ, ವ್ಯಾಘ್ರಾದಿಗಳಲ್ಲಿಯು, ಮೊಸಳೆ, ತಿಮಿಂಗಿಲ ಮುಂತಾದ ಘೋರ ಮೃಗಗಳಲ್ಲಿಯೂ, ಭಯಂಕರ ಜಲ ಚರ ಗಳಲ್ಲಿಯೂ ಇರುವವನು ಈ ಜಗದ್ರೂಪವಾಗಿರುವನು ನಾನೆಂಬ ಈ ಬ್ರಹ್ಮವೇ ಸರ್ವವು ತಾನೇಯಾಗಿರುವವನು ಆದರಿಂದ ಸರ್ವರೊಳಗಿರುವ ಆತ್ಮನೇ ಬ್ರಹ್ಮವು ಅದು ಒಂದೇ

4. ಈ ದೇಹವನ್ನು ಮಾಡಿದವರು ಯಾರು ? ಇದನ್ನು ಮಾಡುವದು ಮನುಷ್ಯ ಮಾತ್ರನಾದ ಯಾವನಿಗೂ ಸಾಧ್ಯವಿಲ್ಲ ತಂದೆ ತಾಯಿಗಳು ಅದನ್ನೂ ಮಾಡಲು ಶಕ್ತರಲ್ಲ ಗರ್ಭದಲ್ಲಿ ಶಿಶುವನ್ನು ಯಾರೂ ಮಾಡಲಾರರು ಸಪ್ತ ಧಾತುಗಳನ್ನು (ಚರ್ಮ, ರಕ್ತ, ಮಾಂಸಾಸ್ಥಿಗಳು ಮೇಧ, ಮಜ್ಜ, ಶುಕ್ರ—ಈ ಏಳು) ಜೋಡಿಸಿ ಶರೀರಾಕಾರವನ್ನು—ಗಂಡು ಹೆಣ್ಣು ಭೇದದಿಂದ—ಸೃಜಿಸುವರಾರು ? ಪ್ರಾಣಗಳನ್ನು, ಇಂದ್ರಿಯಗಳನ್ನು ಅಂತಃಕರಣನ್ನು ಇಡುವರು ಯಾರು ? ಹೀಗಿರುವಾಗ ಜೀವನನ್ನು ಈ ಶರೀರದಿಲ್ಲಿಡುವರು ಯಾರು ? ಆದರಿಂದಲೇ ಶ್ರುತಿ ಪರಮಾತ್ಮನೇ ಈ ಜೀವ ರೂಪದಿಂದ ಅನುಪ್ರವೇಶ ಮಾಡಿರುವನೆಂದು ಬೋಧಿಸುತ್ತದೆ. ಜೀವನ ಸೃಷ್ಟಿಯನ್ನು ಶಾಸ್ತ್ರದಲ್ಲಿ ಹೇಳಿರುವದಿಲ್ಲ. ಬ್ರಹ್ಮವೇ ಈ ಜೀವ ರೂಪದಿಂದಿರುವನೆಂದಾಯಿತ ಆದರಿಂದ ಈ ದೇಹದಲ್ಲಿದ್ದು ವ್ಯವಹರಿಸುವವನೇ ಜೀವನು ಜೀವನೆಂದು ಹೇಳಿರುವದು ಅವಿದ್ಯೆಯ ಉಪಾಧಿಯಿಂದ. ಸಮ್ಯಕ್ ಜ್ಞಾನದಿಂದ ಉಪಾಧಿಯಾದ ಅವಿದ್ಯೆಯು ತೊಲಗಿದರೆ ಅವನು ಆ ಪರಮಾತ್ಮನೇ ಎಂದಾಯಿತು ಆದರಿಂದ ಜೀವವನ್ನು ಬಿಟ್ಟು ಬ್ರಹ್ಮಜ್ಞಾನವಾಗುವದಿಲ್ಲ. ಯಾವಾಗ ಜ್ಞಾನಿಗೆ ತನ್ನ ಹೃದಯದಲ್ಲಿ ಎಲ್ಲಾ ಕಾಮಗಳು ಬಿಟ್ಟು ಹೋಗುವವೋ ಆಗ ಮನುಷ್ಯನು ತನ್ನ ಮನುಜ ಭಾವವ ನೀಗಿ ಅಮೃತನಾಗುತ್ತಾನೆಂದು ಶ್ರುತಿ ಬೋಧಿಸುತ್ತದೆ. (ಬೃ ಉ 4-4-7) ಆದರಿಂದ ಜೀವನ ನಿಜ ರೂಪವೇ ಬ್ರಹ್ಮ ಸ್ವರೂಪವೆಂಬಾದ ಮೇಲೆ ಬ್ರಹ್ಮ ಜ್ಞಾನಕ್ಕೆ ಜೀವನ ಅಜ್ಞಾನವನ್ನು ಕಳೆಯುವದೇ ದ್ವಾರವೆಂದು ನಿಶ್ಚಯವಾಗುತ್ತದೆ

ಹೀಗೆ ಆತ್ಮನನ್ನರಿತವನು ಮಹಾತ್ಮನೆನಿಸುವನು ಅವನು ದೇಹದೊಳಗಿದ್ದರೂ ದೇಹ ಪ್ರಾಣ ಮನೋಬುದ್ಧೀಂದ್ರಿಯಾದಿಗಳು ತಾನಲ್ಲವೆಂದು ತಿಳಿದಿರುವ ಚೈತನ್ಯಾತ್ಮನು ಎಂದು ನಿಶ್ಚಯಿಸಿರುವನು. ಅವನು ನಾನೇ ಸತ್ಯಜ್ಞಾನಾನಂದ ಸ್ವರೂಪನೆಂದೂ, ನಿತ್ಯಶುದ್ಧ ಬುದ್ಧ ಮುಕ್ತನೆಂದೂ ತಿಳಿದು ದೃಢವಾಗಿರಲು ಮನನಿಸುತ್ತಿರುವನು, ನಿಶ್ಚಯಿಸುತ್ತಿರುವನು ನಾನು ಏಕೋಽದ್ವಿತೀಯನು, ನನ್ನಂತೆ ಮತ್ತೊಬ್ಬನಿಲ್ಲವೆಂದೂ, ತಾನೇ ಜಗತ್ತಿನ ಸೃಷ್ಟ್ಯಾದಿ

ಗಳಿಗೆ ಕಾರಣನೆಂದೂ, ತಾನೇ ಸರ್ವವ್ಯಾಪಿಯಾಗಿ ಸರ್ವಜ್ಞ ಸರ್ವಶಕ್ತ, ಮಹಾ ಮಾಯಾಸ್ವರೂಪನೆಂದೂ ತಿಳಿದು ನಿಶ್ಚಯದೊಳಿರುವನು.

ಈ ರೀತಿಯಲ್ಲಿ ಜ್ಞಾನಿಯು ತನ್ನ ಯೋಗಬಲದಿಂದ ಮನಸ್ಸು ಶಾಂತವಾಗಿ ಪರಮಾತ್ಮನಲ್ಲಿ ಭಕ್ತಿಯು ವಿಷಯಗಳಲ್ಲಿ ವೈರಾಗ್ಯವು ದೃಢವಾಗಿ ಮನಸ್ಸು ಶುದ್ಧವಾಗಿ, ಸ್ಥೈರ್ಯವಾಗಿ, ಸಹಜವಾಗಿ ಅನಾಯಾಸವಾಗಿ ನಿರ್ವಾಸನಾ ಮೌನ ನಿಷ್ಠೆಯನ್ನು ಹೊಂದುವನು ಇದರ ಮಹಾತ್ಮ್ಯವು ಎಷ್ಟೆಂದು ಹೇಳಬಹುದು? ಒಂದು ಕ್ಷಣಕಾಲವು ಬ್ರಹ್ಮಾತ್ಮನಜ್ಞಾನನಿಷ್ಠೆಯು ಲಭಿಸಿದವನಿಗೆ ಮಹಾಪಾತಕಗಳೆಲ್ಲವು ನಶಿಸುವವೆಂದು ಶ್ರುತಿ ಸ್ಮೃತಿಗಳು ಹೊಗಳುತ್ತಿರುವಾಗ ಜೀವಾವಧಿ ಬ್ರಹ್ಮನಿಷ್ಠೆಯುಳ್ಳವನಾದರೆ ಅವನುಜೀವನ್ಮುಕ್ತನಾಗುವನೆಂದು ಹೇಳುವದೇನಿದೆ?

ಪ್ರಾರಬ್ಧವಶದಿಂದ ಬಹಿರ್ಮುಖನಾದ ಜ್ಞಾನಿಯು ಆತ್ಮನೇ ತಾನೆಂದು ದೃಢವಾಗಿ ತಿಳಿದು ಎಲ್ಲಾ ಪ್ರಾಣಿಗಳಲ್ಲಿಯು ಇರುವನು ತಾನೇ ಎಂಬ ನಿಶ್ಚಯದೊಳಿರುವನು ಅವನು ಎಲ್ಲರೊಳು ಸಮಬುದ್ಧಿಯುಳ್ಳವನಾಗಿ ಅಸಂಸಾರಿಯಾಗಿರುವನು. ಯಾರಲ್ಲಿಯು ಅಭಿಮಾನವಾಗಲಿ ಉದಾಸೀನವಾಗಲಿ ಅವನಿಗಿರುವದಿಲ್ಲ ಮೃಷ್ಟಾನ್ನವನ್ನು ಬಯಸದೆ ಭಿಕ್ಷಾನ್ನ ಮಾತ್ರದಿಂದ ತೃಪ್ತನಾಗಿರುವನು ನಿರ್ವಿಷಯನಾಗಿ ತನ್ನಾನಂದಲ್ಲಿಯೇ ರಮಿಸುತ್ತಿರುವನು. ಏಕಾಂತವಾಗಿ ನಿರ್ಭೀತನಾಗಿ ನಿರಭಿಮಾನದಿಂದ ಸಂಚರಿಸುವನು ಭವಿಗಳಲ್ಲಿ ಭವಿಯಂತೆ ಕಾಣುತ್ತಿರುವನು. ಅವನು ನಿದ್ದೆಯಂ ಗೆದ್ದವ ಮಹಾತ್ಮನು ಎಲ್ಲವೂ ಬ್ರಹ್ಮಸ್ವರೂಪವೆಂದು ತಿಳಿದ ಜಾಣನವನು ಮತ್ತು ಇವನು ಮೃತ್ಯುಂಜಯನು ಪ್ರಾಣಧರ್ಮಗಳಾದ ಕ್ಷುತ್ಪಿಪಾಸಾದಿಗಳನ್ನು ಅತಿಕ್ರಮಿಸಿರುವ ಧೀರನು ನಿರ್ವಿಷಯ ಸುಖಸ್ವರೂಪನೆಂದು ತನ್ನಾನಂದದಲ್ಲಿ ರಮಿಸುವ ನಿಪುಣನು ತಾನೇ ಶಿವನೆಂದು ತಿಳಿದು ಧ್ಯಾನದ ಅಗತ್ಯವಿಲ್ಲದೆ ಶಾಂತಿಯನ್ನು ಹೊಂದಿರುವ ಶಿವಯೋಗಿಯೇ ಇವನು ಮಾಡದ ಮೋಕ್ಷನಲ್ಲ ಮಾಡಿದರೂ ಮಾಡಿದವನಲ್ಲ. ಸರ್ವಪಾಪಕ್ಷಯವಾಗಿ ಶಿವನೇ ತಾನೆಂದರಿತು ಜೀವನ್ಮುಕ್ತನಾಗಿ ತಾನೇ ತಾನಾಗಿರುವನು

ಯಾವ ಕಾಮವೂ ಇಲ್ಲದ್ದರಿಂದ ಜ್ಞಾನಿಗೆ ಪ್ರಾಣಗಳು ಉತ್ಕ್ರಮಣವಾಗುವದಿಲ್ಲ ಅವನಿಗೆ ಅಂತಃಕರಣವು ಶುದ್ಧವಾಗಿರುವದು. ಮಾಯಾ ಕಾರ್ಯ

ವಾದ ಪ್ರಾಣಗಳು. ಇಂದ್ರಿಯಗಳು ಮನಸ್ಸು ಇವೆಲ್ಲವೂ ಕಾರಣವಾದ ಮಾಯೆಯಲ್ಲಿ ಸೇರಿ ಪ್ರವಿಲಯವಾಗುವದು-ಎಂದರೆ ಶಕ್ತಿರೂಪವಾಗುವದು. ಶಕ್ತಿರೂಪವಾದ ಮಾಯೆಯು ಶಕ್ತನಾದ ಪರಮಾತ್ಮನನ್ನು ಸೇರಿ ಒಂದಾಗು ವದು. (ನತಸ್ಯಪ್ರಾಣಾ ಉತ್ಕ್ರಾಮಂತಿ ॥ ಎಂದು ಶ್ರುತಿ ಬೃ. ಉ: 4-4-6); (2) ಕಾರಣ ಪ್ರಾಪ್ತಾಕಾರ್ಯಸ್ಯ ಪ್ರವಿಲಯ ಪ್ರಸಂಗಾತ್ ॥ ಎಂದು ಭಾಷ್ಯ. ಬ್ರ: ಸೂ: 2-2-42); (3) ಬ್ರಹ್ಮೈವಸನ್ ಬ್ರಹ್ಮಾ ಪ್ಯೇತಿ ॥ ಎಂದು ಶ್ರುತಿ. ಬೃ: ಉ: 4-4-6). ಆದರಿಂದ ಅವನ ಪ್ರಾಣ ಗಳು ಆತ್ಮನೊಡನೆ ಅವಿಭಾಗವಾಗಿ ಏಕೀಭಾವವನ್ನು ಹೊಂದುತ್ತದೆಂದು ಹೇಳಿದೆ. (ಪ್ರಾಣಾಃ ಅತ್ರೈವ ಸಮವನೀಯಂತೇ ॥ ಎಂದು ಶ್ರುತಿ ಬೃ: ಉ: 3-2-11)

ಇಂಥ ಜ್ಞಾನಿಯಾದ ಮಹಾತ್ಮನಿಗೆ ದೇಹಾಭಿಮಾನ ನಿರ್ಮೂಲವಾಗಿರು ವದರಿಂದ ದೇಹಕ್ಕೆ ದೇಹಪಾತಾ ನಂತರ ಆಗಬೇಕಾಗಿರುವ ದಹನ ಕ್ರಿಯೆ ಯಾಗಲಿ ಅಥವಾ ಖನನ ಕ್ರಿಯೆಯಾಗಲಿ ಯಾವದೊಂದನ್ನೂ ಬಯಸುವದಿಲ್ಲ. ಜ್ಞಾನಿಯು ಸಾಕ್ಷಾತ್ ಪರಮೇಶ್ವರನೇ ಯಾಗಿರುವದರಿಂದ ಪ್ರಾರಬ್ಧ ಭೋಗಾ ನಂತರ ಸ್ಥೂಲ ದೇಹವನ್ನು ತ್ಯಜಿಸಿ ವಿದೇಹ ಕೈವಲ್ಯವೆಂಬ ಪರಮ ಪದವನ್ನು ಹೊಂದುತ್ತಾನೆ ॥ (ಜ್ಞಾನೀ ತ್ವಾತ್ಮೈವ ಮೇ ಮತಂ ॥ ಎಂದು ಗೀತೆ. ಅ 7-18.)

ಮಂಗಳಮಸ್ತು

ಓಂ ಶಾಂತಿಃ ಶಾಂತಿಃ ಶಾಂತಿಃ

ಶಿವಂ

॥ ಸರ್ವಂ ಬ್ರಹ್ಮಮಯಂ ಜಗತ್ ॥

